# ಕರ್ಮವೀರ

ಹುಬ್ಬಳ್ಳಿ ತಾ. ೨೦—೬—೪

ಸಂಪುಟ ೨೦ ] [ ಸಂಚಿಕೆ ೮

ಜನಪ್ರಿಯ ಸಚಿತ್ರ ವಾರಪತ್ರಿಕೆ

ಸಂಪಾದಕರು:
ಪ. ರಾ. ಪುರೋಹಿತ

ಸಂಸ್ಥಾಪಕರು— ನಿರ್ದೇಶಕರು:
ರಂ. ರಾ. ದಿವಾಕರ

ಅಹಿಂಸೆಯೆಂದರೆ ಆತ್ಯಂತಿಕ ಮಮತೆ. ಎಲ್ಲ ನಿಯಮಗಳಲ್ಲಿ ಇದೇ ಮೇಲ್ತರ ಗತಿಯದು. ಮಾನವ - ಜನಾಂಗವು, ಸುಖಶಾಂತಿಯಿಂದ ಬದುಕಿಬಾಳಲು, ಇದೊಂದೇ ಸಾಧನ.

. . . . . . . .

ಅಹಿಂಸೆಯಲ್ಲಿ ತುಂಬಾ ಶ್ರದ್ಧೆಯುಳ್ಳವನೇ ಸರ್ವಸಾಕ್ಷಿಯಾದ ಭಗವಂತನಲ್ಲಿ, ಭಕ್ತಿಭಾವಗಳನ್ನೂ ಇಡಬಲ್ಲನು.

. . . . . . . .

ಅಹಿಂಸೆಯು ಬರೀ ಬಾಯಿಮಾತಲ್ಲ ಅನನ್ಯಭಾವದಿಂದ, ಸರ್ವಸ್ವವನ್ನು ಭಗವಂತನಿಗೆ ಅರ್ಪಿಸಿದವನಿಗೆ ಮಾತ್ರ ಇದು ಲಭಿಸುವುದು.

. . . . . . . .

ಅಹಿಂಸೆಯು, ವೀರಶಿರೋಮಣಿಗಳೂ ಅತ್ಯಂತ ಶಕ್ತಿವಂತರೂ ಅದವರ ಖಡ್ಗ. ಅವರು ಅದನ್ನು ಯಾರ ಮೇಲೆಯೂ ಎಂದೂ ಪ್ರಯೋಗಿಸುವದಿಲ್ಲ. ಏಕೆಂದರೆ, ಸಕಲ ಜೀವಿಗಳು ಪರಮಾತ್ಮನ ಅಂಶಗಳೆಂಬುದನ್ನು ಅವರು ಪೂರಾ ಅರಿತಿರುವರು.

— ಗಾಂಧೀಜಿ



**ವಿಜಯನಗರದ ಗಜಶಾಲೆ**

ಶಿಲ್ಪಕಲೆಯ ಆಗರವೆನಿಸುವ ವಿಜಯನಗರದ ಅರಮನೆಯ ಗಜಶಾಲೆಯಿದು. ಇಂಥ ಸಾಮಾನ್ಯ ಕಟ್ಟಡದಲ್ಲಿಯೂ ಎಂಥ ಕಲಾಕೌಶಲದ ಪ್ರದರ್ಶನವಾಗಿದೆ!

★ ಜಗತ್ತನ್ನು ಗೆಲ್ಲಲು ಸ್ಟಾಲಿನ್ನರ ಹಂಚಿಕೆ — ಪುಟ ೫

★ ಭಾಷಣಕಾರರಿಗೆ ಸೂಚನೆಗಳು —(ನಾ. ಕಸ್ತೂರಿ) ಪುಟ ೧೫



ಚಿಕ್ಕಕತೆ

# ಒಬ್ಬ ವೀರ

*

ಸೇವ ನಮಿರಾಜ ಮಲ್ಲ,
ಕಾವಲ್ಕಟ್ಟೆ

“ಪ್ರಿ[illegible] ಈಗ ಓಡಿ! ಓಡಿಹೋಗಿ [illegible]”

ಒಂದು ಕೈಯ್ಯಲ್ಲಿ ಲಾಠಿ ಹಿಡಿದುಕೊಂಡಿದ್ದ ಪೋಲೀಸು ದಳ ಒಂದು ಮುರುಕು ಮನೆ ಯತ್ತ ಬೊಟ್ಟು ತೋರಿಸುತ್ತ ಓಡುತ್ತಿತ್ತು. ಜನರ ದೊಡ್ಡ ಗುಂಪೊಂದು ಮಾರ್ಗದಲ್ಲಿ. ಕೆಲವರ ತಲೆಯಲ್ಲಿ ರಕ್ತ ಸುರಿಯುತ್ತಿತ್ತು. ಕೆಲವರು ಜಯಘೋಷ ಹಾಕುತ್ತಿದ್ದರು. ಪೋಲೀಸರ ದೃಷ್ಟಿ ಬದಲಾಗಿತ್ತು.

ಮನೆಯ ಬಾಗಿಲು ಎದುರಿನಿಂದ ಹಾಕಿತ್ತು. ಕೆಲ ಪೋಲೀಸರು ಹಂಚು ತೆಗೆದರು. ಕೆಲವರು ಈಟಿಯಿಂದ ಬಾಗಿಲು ತೆಗೆಯಲು ಪ್ರಯತ್ನಿಸುತ್ತಿದ್ದರು. ಇಬ್ಬರು ಮಾಡಿನಿಂದ ಇಳಿದರು. ಒಳಗೆ ಜನರ ಗುಂಪು ಚದರಿರಲಿಲ್ಲ. ಪೋಲೀಸರ ಕಣ್ಣು ಕೆಂಪಗಾಗಿತ್ತು. ಅವರ ಕೋಪ, ಸಣ್ಣ ಕೋಪವಲ್ಲ: ಮನಸ್ಸು ಮಾಡಿದರೆ ಈಶ್ವರನ ಮೂರನೆಯ ಕಣ್ಣು ಅವರು.

ಮನೆಯೊಳಗೆ ಎಲ್ಲ ಹುಡುಕುತ್ತಿದ್ದರು. ಸಪ್ಪಳ ಹೊರಗೆ ನಿಂತಿದ್ದವರು ಆತುರದಿಂದ ಕಿವಿಗೊಡುತ್ತಿದ್ದರು. ಕೊನೆಗೆ ಬಾಗಿಲು ತೆಗೆಯಿತು. ಸಮಪ್ರಾಯ ದಾಟಿದ ಹೆಂಗಸೊಬ್ಬಳನ್ನು ಹೊರಗೆ ದಬ್ಬಿದರು. ಅವಳ ಕೈಯ್ಯಲ್ಲೊಂದು ಕತ್ತಿಯಿತ್ತು; ಭೂಮಿಯ ಹುಲ್ಲು ಕೊಯ್ಯುವ ಕತ್ತಿ. ಒಬ್ಬ ಪೋಲೀಸನ ಕಣ್ಣಿನಿಂದ ರಕ್ತ ಇಳಿಯುತ್ತಿತ್ತು. ಮತ್ತೊಬ್ಬನ ಖಾಕಿ ಪೋಷಾಕು ಹರಿದುಹೋಗಿ ರಟ್ಟೆಯಿಂದ ರಕ್ತ ಇಳಿಯುತ್ತಿತ್ತು. ಎಲ್ಲರೂ ಹಲ್ಲು ಕಡಿಯುತ್ತಿದ್ದರು. ಅವಳು ಹೊರಗೆ ಬಿದ್ದಕೂಡಲೇ ಎಲ್ಲ ಪೋಲೀಸರೂ ಅವಳ ಮೇಲೆ ಹಾರಿ ತುಳಿಯ ತೊಡಗಿದರು. ಅವಳ ವಸ್ತ್ರವೆಲ್ಲ ಹರಿದಿತ್ತು; ಗಾಜು ಬಳೆಗಳು ತುಂಡಾಗಿದ್ದುವು ಸ್ಮೃತಿ ತಪ್ಪಿತ್ತು.

ಜನರು ಮುಂದೆ ಮುಂದೆ ಬಂದು ಕಲ್ಲೆಸೆಯುತ್ತ ಬರುತ್ತಿದ್ದರು. ಅವರ ಹುರುಪು ಉಕ್ಕೇರಿತ್ತು. ಪಾಪ ಆ ಮುದುಕಿಗೆ ಹಾಗೆ ಹೊಡೆಯುವುದೆಂದರೆ!

ಒಮ್ಮೆಲೇ ಗುಂಡುಗಳ ಶಬ್ದ. ಜನ ಹೌಹಾರಿತು ಹಿಂದೆ ನೋಡುವುದೇನು! ಕುದುರೆಯ ಮೇಲೆ ಕುಳಿತ ದೊಡ್ಡ ಸವಾರರ ದಳ! ಅವರ ಪಾದರಕ್ಷೆಗಳು ಥಳಥಳಿಸಿ ಹೊಳೆಯುತ್ತಿವೆ. ಈಟಿ ತುದಿಗಿರುವ ಕೋವಿಗಳಿಂದ ಕೆಂಡ ಹಾರುತ್ತಿದೆ. ಕುದುರೆಗಳು ಮುಂದೆ ಮುಂದೆ ಬರುತ್ತಿದ್ದವು.

ಒಬ್ಬನಿಗೆ ತಲೆಗೆ ಗುಂಡು, ಇನ್ನೊಬ್ಬನಿಗೆ ಎದೆಗೆ, ಉಳಿದವರು ಓಡತೊಡಗಿದರು. ಹಾಗೆ ಓಡುವಾಗ ಆ ಸೈನಿಕರಿಗೆ ಎಷ್ಟು ಪಾಪ ಸಿಕ್ಕಿತ್ತೋ ಏನೋ! ಆದರೆ ಅವರದನ್ನು ಲೆಕ್ಕಿಸುವವರಲ್ಲ; ಅಮಲು ಮಿತಿಮೀರಿದೆ ಅವರ ಮೇಲೆ ಅರಸನಿಗಾಗಿ ಹೋರಾಟ!

ಕರ್ತವ್ಯ ಪಾಲನೆಯು ಪವಿತ್ರ ಕರ್ತವ್ಯ!

ಪೋಲೀಸರಿಗೆ ಈಗ ಸುಲಭವಾಯಿತು. ಸ್ಮೃತಿ ತಪ್ಪಿದ ಹೆಂಗಸಿನ ಕಿವಿ ಕುತ್ತಿಗೆಗಳಲ್ಲಿದ್ದ ಚಿನ್ನಾಭರಣ ದೋಚಿದರು. ಮತ್ತೆ ಕೆಲವರು ಅವಳನ್ನು ಪುನಃ ಮನೆಗೆ ಎತ್ತಿಕೊಂಡು ಹೋದರು. ಬಾಗಿಲು ಧಡಾರನೆ ಹಾಕುವ ಸದ್ದು. ಒಳಗೆ ಹೋದ ಪೋಲೀಸರು ಬೇಗನೆ ಹೊರಗೆ ಬರಲಿಲ್ಲ. ಅವರು ಬರುವಾಗ ಹೆಂಗಸು ಸತ್ತಿರಬೇಕು.

ಹೊರಟು ಮಾರ್ಗದಲ್ಲಿ ನಿಂತಿರುವಾಗ ಎರಡು ಗುಂಡುಗಳು. ಇಬ್ಬರು ಬಿದ್ದರು. ಮತ್ತೂ ಧಂ ಧಂ. ಪೋಲೀಸರೆಲ್ಲ ಓಡಿದರು. ಅವರ ಧೈರ್ಯ ನೀರಾಯಿತು.

ಮತ್ತೆರಡು ಗಳಿಗೆಯಲ್ಲಿ ಆ ಮನೆ ನೆಲಸಮವಾಯಿತು, ಹೆಂಗಸಿನ ಮಣ್ಣಿನ ಮೂಳೆ ಮಣ್ಣಿಗೆ ಹೋಯಿತು.

ಪೋಲೀಸಿನವರಿಗೆ ಇನ್ನೂ ತೃಪ್ತಿಯಾಗಿರಲಿಲ್ಲ. ಅಲ್ಲಲ್ಲಿ ಏನನ್ನೋ ಹುಡುಕುತ್ತಿದ್ದರು. ಈಗ ಅವರೊಡನೆ ತುಂಬ ಆಯುಧಗಳಿವೆ. ಎಂತಹ ಪ್ರಸಂಗಕ್ಕೂ ಅವರು ತಯಾರಿರುವರು. ಕೋಪ ಅವರದು ಮಿತಿಮೀರಿದೆ. ದಳ ನಾಯಕ ಮೀಸೆ ತಿರುವುತ್ತ ಅತ್ತಿತ್ತ ಎಲ್ಲರನ್ನು ನೋಡುತ್ತಿದ್ದ. ಅವನ ಪಾಳೆಯದವರು ಅವನ ಕಣ್ಣಿಗೆ ಬೇರೆ ಇದ್ದ ಮನೆಗಳನ್ನೆಲ್ಲ ಹೊಕ್ಕು ವಿಚಾರಿಸಿ ಹೊರ ಬರುತ್ತಿದ್ದರು.

ಇನ್ನೊಂದು ಪುರವಣಿಗೆ ಬಂತು. ಚೆನ್ನಾಗಿ ಹುಡುಗಿಯರೇ ಅದರಲ್ಲಿ. ಎಲ್ಲರ ಕೈಯ್ಯಲ್ಲೂ ಪತಾಕೆಗಳಿವೆ; ಪೋಲೀಸರ ಕೈ ಸ್ಫುರಣವಾಯಿತು. ಲಾಠಿಗೆ ಚಪ್ಪರಿಸತೊಡಗಿತು, ಕಣ್ಣು ಗಿರಗಿರೆಂದಿತು.

ಸರಿ. ದಳ ನಾಯಕ ಒಬ್ಬಳ ಪತಾಕೆಯನ್ನು ಹಿಡಿದೆಳೆದ. ಅವಳು ಬಿಡಲಿಲ್ಲ. ರಕ್ಕಸನಂತೆ ನಗತೊಡಗಿದ. ಕೈಯ್ಯನ್ನು ಅವಳು ಸಡಿಲಿಸಲಿಲ್ಲ ಹೋರಾಡುತ್ತಲೇ ಇದ್ದಳು. ಆಗ ಸೆರಗು ಅವಳ ಹೆಗಲಿಂದ ಜಾರಿತು.

ಉಳಿದವರು ಗುಂಪುಗೂಡಿದ್ದರು. ದಳ ನಾಯಕ ರವಕೆಯ ಎಡೆಯಿಂದ ಕಾಣುತ್ತಿದ್ದ ಆ ಪುಷ್ಟ ಎದೆಯನ್ನು ಕಂಡು ಉನ್ಮತ್ತನಾಗಿ ಅವಳನ್ನು ಅಪ್ಪಿ ಹಿಡಿಯಲು ನೋಡಿದ. ಅವಳು ಸಿಂಹಿಣಿಯಂತೆ ಅವನಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದಳು.

ಅವಳು ಸೋಲುತ್ತಿದ್ದಳು. ಕೆಲವರು ಓಡಿಯೇ ಹೋದರು. ಕೆಲವರನ್ನು ಪೋಲೀಸರು ಬೆನ್ನಟ್ಟುತ್ತಿದ್ದರು. ಕೊನೆಗೆ ಅವನ ಹಿಡಿತ ಅವಳ ದೇಹದ ಮೇಲಾಯಿತು. ಅವಳು ಕೆಳಕ್ಕೆ ಬಿದ್ದಿದ್ದಳು.

ಅಂಗಡಿಗಳೆಲ್ಲ ಮುಚ್ಚಿದ್ದುವು. ಜನರು ಸಂದುಗೊಂದುಗಳಿಂದ ಇಣಿಕಿ ನೋಡುತ್ತಿದ್ದರು. ಉದ್ರಿಕ್ತ ಪೋಲೀಸು ಅಧಿಕಾರಿ ಅವಳು ಉಟ್ಟಿದ್ದ ವಸ್ತ್ರವನ್ನು ಹಿಡಿದು ಎಳೆದ. ಅವಳು ಈಗ ಬೊಬ್ಬೆ ಹಾಕತೊಡಗಿದ್ದಳು ಪತಾಕೆ ಚೂರು ಚೂರಾಗಿ ಅಲ್ಲೇ ಬಿದ್ದಿತ್ತು.

ಅಷ್ಟರಲ್ಲಿ ಕಿವಿ ಕೀಳುವಂತಹ ಶಬ್ದಗಳನೇಕ ಮರುಗಳಿಗೆಯಲ್ಲಿ ಪೋಲಾಸಾಧಿಕಾರಿ ರಕ್ತಕಾರಿ ಸತ್ತಿದ್ದಾನೆ. ಮೂವರು ಪೋಲೀಸರೂ ಬಿದ್ದಿರುವರು. ಬಾಕಿಯವರ ಪತ್ತೆಯಿಲ್ಲ.

ಅಧಿಕಾರಿಯ ಕಣ್ಣು ಇನ್ನೂ ತೆರೆದೇ ಇತ್ತು. ಕೈಬೆರಳುಗಳು ಅಮುಕುವ ಹಾಗೆ ಕಾಣುತ್ತಿದ್ದುವು ಮುಖದಲ್ಲಿ ಅಳುವಿತ್ತು— ಕಠೋರತನವಿತ್ತು. ಹಲ್ಲು ಕಚ್ಚಿದ್ದ. ಎದೆಯಲ್ಲಿ ದೊಡ್ಡದೊಂದು ತೂತು. ರಕ್ತ ಬಳಬಳನೆ ಚಿಮ್ಮುತ್ತಿತ್ತು. ಏಳು ಗುಂಡಿನ ಕೋವಿ ಸೊಂಟದಲ್ಲೇ.

ಸತ್ತಿದ್ದರೂ ಪಾಶವಿಕವೃತ್ತಿ ಅವನನ್ನು ಬಿಟ್ಟಿರಲಿಲ್ಲ. ಎಲ್ಲಿ ಸಿಡಿದುಹೋಗುವನೋ ಎಂದು ಕಾಣುತ್ತಿತ್ತು ಮುಖಭಾವ. ಕರ್ತವ್ಯಪಾಲನೆಯಲ್ಲಿ ಅವನು ಸತ್ತವನು. ಕುಡಿದ ಅಮಲಿನಿಂದ ತಾನು ಸತ್ತುದೂ ಅವನಿಗೆ ತಿಳಿಯದು.

ಎಲ್ಲರೂ ಚದರಿದೊಡನೆ ಒಬ್ಬ ವ್ಯಕ್ತಿ ಮೆಲ್ಲನೆ ಬಂದು ಬಿದ್ದಿದ್ದ ಹುಡುಗಿಯನ್ನು ಎಬ್ಬಿಸಿತು. ಆ ಮೇಲೆ ಸತ್ತಿದ್ದ ಪೋಲೀಸಾಧಿಕಾರಿಯ ಮೈಮೇಲೆ ಇದ್ದ ಎಲ್ಲವನ್ನು ತೆಗೆದಾಯಿತು. ಚೀಲದಲ್ಲಿ ದೊಡ್ಡದೊಂದು ಕಾಗದದ ಕಟ್ಟು ಇತ್ತು. ಹುಡುಗಿ ಮತ್ತೆ ಅವನೊಡನೆ ಬದಿಯಲ್ಲಿದ್ದ ಒಂದು ಕಟ್ಟಡಕ್ಕೆ ಹೋದಳು.

ಅಲ್ಲಿ ಎಲ್ಲ ಬಿಡಿಸಿ ನೋಡಿದರು ಅದರಲ್ಲೊಂದು ಸರಕಾರದ ಕಾಗದವಿತ್ತು ಆತುರದಿಂದ ಅವಳು ಒಡೆದು ಓದಿದಳು.

“ಪೋಲೀಸ ಇನ್ಸಪೆಕ್ಟರ್ ಹುಸೇನ್.

ನೀನು ನಿನ್ನೆ ದಂಡಿನಲ್ಲಿ ನಿನ್ನ ಕೆಲಸವನ್ನು ಶ್ರದ್ಧಾಪೂರ್ವಕ ಮಾಡದ್ದರಿಂದ ನಿನ್ನನ್ನು ಇವತ್ತೇ ಕೆಲಸದಿಂದ ನಿವೃತ್ತಿಪಡಿಸಿದೆ. ಅದೂ ಅಲ್ಲದೆ ನಿನ್ನ ಮೇಲೆ ಇನ್ನು ಕೆಲವು ಅಪಾದನೆಗಳಿರುವ ಕಾರಣ ನೀನು ಬಂಧನಕ್ಕೆ ಒಳಗಾಗಿದ್ದೀ.

ಮಹಾರಾಜರ ಅಪ್ಪಣೆ ಮೇರೆಗೆ.
ಸಹಿ.”

ಮತ್ತೊಂದು ಕಾಗದ. ಅದು ಸ್ವಲ್ಪ ಹಳತಾಗಿತ್ತು.

“ಎಲ್ಲ ಪೋಲೀಸಾಧಿಕಾರಿಗಳಿಗೆ— ಈ ಹುಕುಂ ಪ್ರಕಾರ ನೀವು ಶಾಂತಿಗೆ ಭಂಗಮಾಡುವವರ ಮೇಲೆ ಲಾಠಿಯಿಂದ ಹಿಡಿದು ಗುಂಡು ಹೊಡೆಯುವುದರ ವರೆಗೆ ಏನನ್ನು ಮಾಡಲೂ ಅಧಿಕಾರ ಹೊಂದಿದವರಾಗಿರುತ್ತೀರಿ. ಅಜ್ಞೆಯನ್ನು ಯಾರಾದರೂ ಉಲ್ಲಂಘಿಸಿದರೆ ಕಠಿಣ ಶಿಕ್ಷೆ ಕೊಡಲಾಗುವುದು.”

ಪೋಲೀಸಾಧಿಕಾರಿ! ಅವನು ಅಂದೇ ಕೆಲಸದಿಂದ ನಿವೃತ್ತಿಯಾಗಬೇಕಿತ್ತು! ಅವನು ಮುಂಚಿನ ದಿನ ಹಸುಳೆಗಳ ಮೇಲೆ ಗುಂಡು ಹಾರಿಸಲು ಒಪ್ಪಲಿಲ್ಲವಂತೆ ಅದಕ್ಕಾಗಿಯೇ ಇಂದು ಚೆನ್ನಾಗಿ ಕುಡಿದು ಬಂದಿದ್ದ. ಇಂದು ಅವನಲ್ಲಡಕವಾಗಿದ್ದ ಹೃದಯದ ಮೃದು ಭಾಗಗಳೆಲ್ಲ ಕಠಿಣವಾಗಿದ್ದುವು.

ಅದರೆ ಅವನ ಕೆಲಸದೊಡನೆ ಅವನ ಆಯುಸ್ಯವೂ ತೀರಿತ್ತು. ಅವನ ಹೆಣವನ್ನು ಕೇಳುವವರಿಲ್ಲ. ಸತ್ತಮೇಲೂ ಜನರು ಕಲ್ಲು ಹೊಡೆಯುತ್ತಿದ್ದಾರೆ, ದೂರದಿಂದ ತಿವಿಯುತ್ತಿದ್ದಾರೆ. ಅಷ್ಟು ರೋಷದ ಸಂಜು. ಈಗ ಸಾಯದಿರುತ್ತಿದ್ದರೆ ಅವನು ಉಳಿದ ಆಯುಷ್ಯವನ್ನು ಸೆರೆಮನೆಯಲ್ಲಿ ಕಳೆಯಬೇಕಾಗುತ್ತಿತ್ತೋ ಏನೋ!

ಅವರ ಪರೀಕ್ಷೆ ಮುಗಿಯಿತು ಇಬ್ಬರೂ ಸಾದಾ ಉಡುಪನ್ನು ಧರಿಸಿ ಹೋದರು.

ಪುನಃ ಅಲ್ಲಿ ಪೋಲೀಸರ ದಾಳಿ ಸುರುವಾಯಿತು. ಈಗಿನ ದಾಳಿ, ಕ್ರೂರ ದಾಳಿ. ಕಂಡ ಕಂಡ ಮನೆಗಳಲ್ಲಿ ಹೊಕ್ಕರು. ಗಂಡಸರಿಗೆ ಹೊಡೆದರು. ಹೆಂಗಸರನ್ನು ಮಕ್ಕಳನ್ನು ಬೀದಿಯಲ್ಲಿ ಓಡಿಸಿದರು. ಸಿಕ್ಕಿದ್ದನ್ನೆಲ್ಲ ದೋಚಿಕೊಂಡು ಕಿಸೆಗೆ ಹಾಕಿಕೊಂಡರು. ಒಂದು ಮನೆಗೆ ಬೆಂಕಿಯನ್ನೇ ಕೊಟ್ಟುಬಿಟ್ಟರು.

ಇತ್ತ ಅಧಿಕಾರಿಯ ಗಾಯವಾದ ದೇಹವನ್ನು ಮತ್ತೆ ಅಸ್ಪತ್ರೆಗೆ ಸಾಗಿಸಿದರು. ಅಲ್ಲಿ ಶವ ಪರೀಕ್ಷೆಯಾಯಿತು.

ತಪ್ಪಿಸಿಕೊಂಡು ಹೋದ ಹುಡುಗಿ ಮತ್ತು ಗಂಡಸು ಈಗ ಬಹಳ ದೂರ ಸಾಗಿದ್ದರು. ಇಬ್ಬರ ಕೈಯ್ಯಲ್ಲೂ ಕೋವಿಗಳಿದ್ದವು. ಆದರೆ ಅವರಿಬ್ಬರೂ ವೇಷ ಬದಲಿಸಿದ್ದರು. ಅವಳು ದೊಡ್ಡದೊಂದು ಮೂಟೆಯನ್ನು ಹೊತ್ತಿದ್ದಳು. ಅವನು ಗಡ್ಡ ಬಿಟ್ಟುಕೊಂಡು ಹರುಕು ಅಂಗಿ ಹಾಕಿಕೊಂಡಿದ್ದ. ಎಲ್ಲ-ಕಡೆಯಲ್ಲೂ ಪೋಲೀಸರು ಮತ್ತು ಸೈನಿಕರು ತಿರುಗಾಡುತ್ತ ಹಾವಳಿ ಮಾಡುತ್ತಿದ್ದರು. ಇವರಿಬ್ಬರ ಗೋಜಿಗೆ ಯಾರೂ ಹೋಗಲಿಲ್ಲ. ಅಷ್ಟು ಅನಾಕರ್ಷಣೀಯ ವೇಷ ಅವರದು.

ಒಂದೆಡೆ ಹೋಗಿ ಕುಳಿತರು. ಈ ವರೆಗೂ ಒಬ್ಬರ ವಿಚಾರ ಒಬ್ಬರಿಗೆ ಗೊತ್ತಿಲ್ಲ. ಹುಡುಗಿಗೆ ಈ ಅಪರಿಚಿತ ವ್ಯಕ್ತಿಯೊಡನೆ ಹೋಗಲು ಹೆದರಿಕೆಯೂ ಅಗಲಿಲ್ಲ. ಅವನು ಮೆಲ್ಲನೆ ಬುತ್ತಿ ಬಿಚ್ಚಿದ. ಮೂರು ರಾಗಿಯ ರೊಟ್ಟಿಗಳಿದ್ದವು ಕಟ್ಟಿನಲ್ಲಿ. ಮತ್ತೆ ಸ್ವಲ್ಪ ನೀರು.

“ತಿನ್ನು ತಂಗಿ” ಎಂದು ಎರಡು ರೊಟ್ಟಿಗಳನ್ನು ಅವಳ ಮುಂದಿಟ್ಟ.

ಅವನ-ಆ ಮಧುರ, ನಿಷ್ಕಪಟ ಸ್ವರ, ಆ ಉರಿಯುತ್ತಿದ್ದ ಕಣ್ಣುಗಳು ಅವಳ ಎದೆಯಲ್ಲಿ ಧೈರ್ಯ—ವಿಶ್ವಾಸಗಳನ್ನು ತುಂಬಿಸಿದುವು.

“ತಂಗಿ!” ಅವಳ ಮೈಗೆ ರೋಮಾಂಚನವಾಯಿತು. ಎಂಥ ಸ್ನೇಹಮಯ ಭಾವನೆ! ಅವನು ಇನ್ನೂ ತರುಣ. ಅವನ ವಯಸ್ಸಿನವರ ಬಾಯಿಯಿಂದ ಆ ರೀತಿಯ ಸಂಬೋಧನೆಯನ್ನವಳು ಎಂದೂ ನಿರೀಕ್ಷಿಸಿರಲಿಲ್ಲ. ಅವಳು ಓದಿದ ನೋಡಿದ ಕತೆಗಳಲ್ಲಿ ಯುವಕನೆಂದರೆ ರಾಕ್ಷಸ, ಕಾಮಾಂಧ ಇತ್ಯಾದಿಯಾಗಿ ವರ್ಣಿಸಿದ್ದರು.

ಅವನು ಅವಳ ಮುಖ ನೋಡುತ್ತಿಲ್ಲ. ಎಲ್ಲೋ ಹಾರುತ್ತಿರುವ ಪಕ್ಷಿಗಳ ಸ್ವರವನ್ನವ ಅಲಿಸುತ್ತಿದ್ದನು. ಅವನ ದೃಷ್ಟಿಯಲ್ಲಿ ಕಠೋರತೆಯಿತ್ತು. ಲೋಕವನ್ನಿಡೀ ಸುಡಲು ಹೊರಟಿರುವನೋ ಎಂದು ತೋರುತ್ತಿತ್ತು.

“ಮೂರು ದಿನಗಳಿಂದ ಇದು ಮೊದಲನೆಯ ಆಹಾರ” ಮತ್ತೆ ಅವನು ಹೇಳಿದನು. ಈ ರೊಟ್ಟಿಗಳನ್ನು ಮನೆಯಲ್ಲಿ ಒಬ್ಬ ಹೆಂಗಸು ಇತ್ತಿದ್ದಳಂತೆ. ಮರುಗಳಿಗೆಯಲ್ಲಿ ಅವಳಿಗೆ ಅದಕ್ಕಾಗಿ ಕಷ್ಟ ಪಡಬೇಕಾಯಿತಂತೆ. ಪೆಟ್ಟು ತಿನ್ನಬೇಕಾಯಿತಂತೆ.

ಹುಡುಗಿಗೆ ಆಶ್ಚರ್ಯವಾಗುತ್ತಿತ್ತು. ಅವಳು ಒಂದು ರೊಟ್ಟಿಯನ್ನು ಅವನಿಗೆ ಹಿಂದೆ ಕೊಟ್ಟಳು.

“ನನಗೆ ಇದು ಸಾಕು. ನನ್ನ ಹಸಿವೆ ಹಿಂಗಿದೆ ನೀನು ತಿನ್ನು. ನಿನಗೆ ಹಸಿವನ್ನು ಸಹಿಸಲು ಸಾಧ್ಯವಿಲ್ಲ.”

ಮರಳಿ ಅವನ ಮುಖ ನೋಡಿದಳು. ಅದೇ ಧೃಢತೆ, ಅದೇ ಶಾಂತತೆ, ಅದೇ ಕೋಮಲತೆ ಇನ್ನೂ ಉಕ್ಕಿ ಹರಿಯುತ್ತಿತ್ತು. ಅವನ ಅಗಲವಾದ ಎದೆಯಲ್ಲಿ ಬೆವರು ಹರಿಯುತ್ತಿತ್ತು. ರಕ್ತಚಲನೆ ಅಗ ಜೋರಾಗಿದ್ದಿತೆಂದು ಬೇರೆ ಹೇಳಬೇಕಾಗಿರಲಿಲ್ಲ.

ಸುಮಾರು ಸಮಯ ಕಳೆದಿರಬಹುದು. ಅವಳಿಗೆ ಅವನನ್ನು ಮಾತನಾಡಿಸುವ ಧೈರ್ಯವಿಲ್ಲ. ಅವಳು ಮಾತನಾಡಬೇಕೆಂದು ಎಷ್ಟು ಸಲ ನಿಶ್ಚಯಿಸಿ ಅವನ ಮುಖ ನೋಡಿದರೂ ಅವಳ ನಾಲಗೆಯಿಂದ ಮಾತು ಜಾರದು. ಅವನಾಗಿ ಏನೂ ಮಾತನಾಡುವದಿಲ್ಲ. ಒಮ್ಮೊಮ್ಮೆ ಬದಿಯಲ್ಲಿದ್ದ ಕಾಗದದ ಕಟ್ಟಿನಿಂದ ಕಾಗದಗಳನ್ನು ತೆಗೆದು ಪರೀಕ್ಷಿಸುವ; ಮತ್ತೆ ಎಲ್ಲೋ ನೋಡುವ. ಅವಳು ಅವನ ಹತ್ತಿರ ಅಗ್ನಿ ಹತ್ತಿರ ಕುಳಿತುಕೊಂಡಿದ್ದಳೆಂಬ ಗೊಡವೆ ಅವನಿಗಿಲ್ಲ.

ಒಮ್ಮೆ ತುಟಿ ಕಚ್ಚಿದ. “ಹಾ ಕಾಯಿ!” ಎಂದು ಉದ್ಗರಿಸಿ ಒರಗಿದ. ಅವಳಿಗೆ ಭಯವಾಯಿತು. ಹಲ್ಲುಕಡಿಯುತ್ತಿದ್ದ. ಕಲ್ಲು ಧೂಳಿನ ಮೇಲಿದ್ದ ಅವನ ತಲೆಯನ್ನು ಮೆಲ್ಲನೆ ತನ್ನ ತೊಡೆಯ ಮೇಲಿರಿಸಿಕೊಂಡಳು.

ಸ್ಮೃತಿ ಬರಲು ಅವನಿಗೆ ಸಮಯ ಹಿಡಿಯಿತು. ಕಣ್ದೆರೆದ. ಅವಳ ಮುಖ ಅವನಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಅವನ ಕಣ್ಣಿನ ನೀರವತೆ ಅವಳನ್ನು ತಲ್ಲಣಿಸಿತು. ಅವನನ್ನು ಬಿಗಿಯಾಗಿ ಅಪ್ಪಿ ಹಿಡಿದಳು, ಅವಳ ಎದೆ ಅವನದನ್ನು ಒತ್ತುತ್ತಿತ್ತು—ಅದೇ ಎದೆ, ಆ ಪೋಲೀಸಾಧಿಕಾರಿಯನ್ನು ಉದ್ರಿಕ್ತಗೊಳಿಸಿದ ಪುಷ್ಟ ಎದೆ.

ಮತ್ತೆ ಅವನು ಅವಳ ವಿಚಾರ ಕೇಳತೊಡಗಿದ. ಕೊನೆಗೆ ಅವಳನ್ನು ಮನೆಗೆ ಕೊಂಡು ಹೋಗಿ ಬಿಡುವೆನೆಂದ. ಅವಳ ಅಡ್ಡಿಯನ್ನು ಲಕ್ಷಿಸಲಿಲ್ಲ.

“ನೀನು ನಿನ್ನ ಪಾಲಿನ ಕರ್ತವ್ಯ ಮಾಡಿದೆ. ಇನ್ನು ಒಮ್ಮೆಲೇ ಹಾಗೆಲ್ಲ ಮಾಡುವ ಸಾಮರ್ಥ್ಯ ನಿನ್ನಲ್ಲಿಲ್ಲ. ನೀನು ನಿನ್ನ ಮನೆಗೆ ಹೋಗಲೇಬೇಕು. ಅವರು ಬಹುಶಃ ಹುಡುಕುತ್ತ ಇದ್ದಾರು. ನಿನ್ನ ಸೇವೆ ಅವಶ್ಯವಾದಾಗ ನಾನು ಬರುವೆನು. ಅಗ ಬಾ.”

ಅವಳು ಈ ಮಾತಿನ ಮುಂದೆ ನಿಶ್ಶಕ್ತೆ. ಅವಳ ಹಿಡಿತವನ್ನು ಬಿಡಿಸುತ್ತ, ಅವಳ ಕೈ ಹಿಡಿದು ಎದ್ದ.

ಪುನಃ ನಿಶ್ಶಬ್ದ.

ಅವನು ಸಾಮಾನುಗಳನ್ನೆಲ್ಲ ಒಂದು ಪೊದರಿನಲ್ಲಿಟ್ಟ.

ಸಂಜೆಯಾಗಿತ್ತು. ಇಬ್ಬರೂ ಮೆಲ್ಲನೆ ನಡೆಯುತ್ತ ಹೋಗುತ್ತಿದ್ದರು. ಅವಳು ಅವನ ಆ ಗಂಡು ನಡಿಗೆಯ ಗತಿಯನ್ನೇ ನೋಡುತ್ತಿದ್ದಳು. ತನ್ನನ್ನು ಘೋರ ವಿಪತ್ತಿನಿಂದ ತಪ್ಪಿಸಿದ ಅವನ ಧೈರ್ಯವನ್ನೂ ಉದಾರತೆಯನ್ನೂ ಅವಳಿಗೆ ಮರಳಿ ನೆನೆಯದಿರಲಾಗಲಿಲ್ಲ.

ಅಲ್ಲೇ ಮನೆ ಕಾಣಿಸುತ್ತಿದೆ. ಇನ್ನು ಎರಡು ನಿಮಿಷದಲ್ಲಿ ಒಳಗೆ ಹೋಗಬಹುದು.

ಅಷ್ಟರಲ್ಲಿ ಹಾಯ್! ಇಬ್ಬರು ಪೋಲೀಸರು ಸೈಕಲ್ಲಿನಲ್ಲಿ ಅವರ ಹಿಂದಿನಿಂದಲೇ ಬೆನ್ನಟ್ಟುತ್ತ ಬರುತ್ತಿದ್ದರು. ಅವನಿಗೆ ಅವರ ಗುರುತು ಸಿಕ್ಕಿತು. ಅವರಿಬ್ಬರೂ ಸತ್ತ ಪೋಲೀಸು ಅಧಿಕಾರಿಯೊಡನೆ ಇದ್ದವರು. ಅವಳನ್ನು ಮನೆಯೊಳಗೆ ಓಡು. ಎಂದ. .

ಪೋಲೀಸರು ಸೈಕಲಿನಿಂದಿಳಿಯುವಾಗ ಅವನು ಕೋವಿ ಹೊಡೆದಾಗಿತ್ತು. ಗುರಿ ತಪ್ಪಿತು. ಮತ್ತೆ ಅದರಲ್ಲಿ ಗುಂಡುಗಳಿದ್ದಿಲ್ಲ. ಅವನೂ ಓಡತೊಡಗಿದ. ಅವರಿಬ್ಬರೂ ಅವನನ್ನು ಹಿಡಿದರು. ಅವನೂ ಹೊಡೆದ. ಅವರೂ ಹೊಡೆದರು.

ಅವಳನ್ನು ಅವಳ ಮನೆಯವರು ಎತ್ತಿಕೊಂಡು ಒಳಗೆ ಕೊಂಡು ಹೋಗಿದ್ದರು.

ಅಷ್ಟರಲ್ಲಿ ಒಂದು ಸೈನಿಕರ ಲಾರಿ ಬಂತು. ಎಲ್ಲರೂ ಕೈ ಮೇಲೆತ್ತುತ್ತಿದ್ದುದು ಕಾಣಬರುತ್ತಿತ್ತು.

ತುಸು ಸಮಯದಲ್ಲೇ ಲಾರಿ ಮುಂದರಿಯಿತು. ಪುನಃ ನಿಶ್ಶಬ್ದ.

ಕಾಗೆಗಳು ಮಾತ್ರ “ಕಾಕಾ” ಎಂದು ಕೂಗುತ್ತ ಹಾರಾಡುತ್ತಿದ್ದುವು.

# ದೇಶಾಂತರಗಳಿಂದ

## ಡಾ. ಮಾಲನ್ನರ ಶ್ವೇತಬುದ್ಧಿ

ಜನರಲ್ ಸ್ಮಟ್ಸರ ಪರಾಜಯವಾಗಿ ಡಾ. ಮಾಲನ್ನರು ಮುಖ್ಯ ಮಂತ್ರಿಪದವಿಯನ್ನು ವಹಿಸಿದ ಮೇಲೆ ಅವರ ಚುನಾವಣೆಯ ಘೋಷಣೆಯಲ್ಲಿ ಕೊಟ್ಟ ವಚನಗಳೆಲ್ಲವನ್ನೂ ಪೂರಯಿಸಲಾಗುವುದೆಂಬ ಅವರ ಅಭಿಪ್ರಾಯ ಹೊರಬಿದ್ದಿದೆ. ಸ್ಮಟ್ಸ್ ಸರಕಾರ ರಚಿಸಿದ ಏಶಿಯನ್ನರ ಭೂಧಾರಣೆಯ ಕಾಯದೆ ಮತ್ತು ಹಿಂದೀಯ ಪ್ರಾತಿನಿಧ್ಯದ ಕಾಯದೆ ಇವುಗಳನ್ನು ಮಾಲನ್ನರ ಸರಕಾರವು ನಿರಾಸ ಮಾಡುವುದೆಂದು ತಿಳಿಯುತ್ತದೆ. ಹಿಂದೀ ಪ್ರಾತಿನಿಧ್ಯದ ಕಾಯದೆಯಲ್ಲಿ ಹಿಂದೀಯರು ದ. ಅಫ್ರಿಕದ ಶಾಸನ ಸಭೆಗೆ ಮೂವರು ಐರೋಪ್ಯರನ್ನು ಪ್ರತಿನಿಧಿಗಳನ್ನಾಗಿ ಆರಿಸಿ ಕಳುಹಬಹುದಾಗಿತ್ತು. ಆ ಸೌಕರ್ಯವನ್ನೂ ಇದರಿಂದ ಕಸಿದುಕೊಂಡಂತಾಗುವುದು. ನಾತಾಳದ ಹಿಂದೀಯರು ಮಾಲನ್ನರೊಡನೆ ಸಂಧಾನ ಮಾಡಲೆಂದು ತಮ್ಮ ನಿಷ್ಕ್ರಿಯ ಪ್ರತೀಕಾರವನ್ನು ಕೂಡ ತಾತ್ಕಾಲಿಕವಾಗಿ ನಿಲ್ಲಿಸಿದ್ದರು. ಆದರೆ ಮಾಲನ್ನರ ಶ್ವೇತಬುದ್ಧಿಯನ್ನು ಅದಕ್ಕೆ ಒಲಿಸಿಕೊಳ್ಳಲಾಗಲಿಲ್ಲ! ಇದನ್ನು ನೋಡಿ ಸದೇಹವಾಗಿ ಹಿಂದೀಯರನ್ನು ದ. ಅಫ್ರಿಕದಿಂದ ಮಾಲನ್ನರು ಓಡಿಸುವುದು ಅಸಂಭಾವ್ಯವಲ್ಲ ಎನ್ನುವಂತಾಗಿದೆ.

ದ. ಅಫ್ರಿಕದ ಡಾ. ಮಾಲನ್ನರು

ಮಾಲನ್ನರು ಕಮ್ಯುನಿಸ್ಟ್ ವಿರೋಧಿಗಳು. ಬ್ರಿಟನ್ನಿಗಿಂತ ಹೆಚ್ಚಾಗಿ ಅವರು ಸೋವಿಯಟ್ ರಶಿಯವನ್ನು ದ್ವೇಷಿಸುತ್ತಾರೆ. ಡಾ. ಅರ್ಥ ಕೆಪ್ಪೆಲ್ ಜೋನ್ಸರ ಭವಿಷ್ಯ ನಿಜವಾಗುವುದಾದರೆ, ಅತಿಪ್ರವೃತ್ತಿಯ ಕೆಲವರು ಆಡಳಿತಗಾರರಾಗುವರು; ಕಪ್ಪು ಜನರನ್ನು ಬಂದೂಕಿನ ತುದಿಯಿಂದ ಕೆಳಗೊತ್ತಲಾಗುವುದು; ಕರಿಯರು ಸಂಪೂರ್ಣ ಮಾಯವಾಗಿ ಬ್ರಿಟಿಶರು ಆ ದೇಶದಲ್ಲಿ ಬಂದು ನೆಲೆಸುವರು. ಆನಂತರ 'ನಾಗರಿಕ ಜಗತ್ತೇ' ದ. ಅಫ್ರಿಕದ ಮೇಲೆ ಮುನಿದೆದ್ದು ಅದನ್ನು ನಾಶ ಮಾಡುವುದು!

## ಗ್ರೀಸಿಗೆ ಅಮೇರಿಕದ ಸೈನ್ಯ ಸಹಾಯ

ಅಮೇರಿಕಕ್ಕಿಂದು ಎಲ್ಲಿನೋಡಿದರಲ್ಲಿ ಕಮ್ಯುನಿಸ್ಟರೇ ಕಾಣಿಸುತ್ತಿದ್ದಾರೆ. ರಶಿಯವಂತೂ ಒಂದು ಭೂತವಾಗಿಯೇ ತೋರುತ್ತದೆ. ಈ ಭೂತಭಯದಿಂದ ರಕ್ಷಿಸಿಕೊಳ್ಳಲು ಗ್ರೀಸು ತುರ್ಕಿಗಳಿಗೆ ಜನ, ಧನ, ಯಂತ್ರಸಾಮಗ್ರಿ ಮುಂತಾದ ಎಲ್ಲ ಸಹಾಯವನ್ನೂ ಕೊಡುತ್ತ ನಡೆದಿದೆ. ಅಲ್ಲಿ ತಮ್ಮ ಪ್ರಭಾವಕ್ಕೊಳಗಾದ ಸರಕಾರಗಳನ್ನು ರಚಿಸುವದರಲ್ಲಿ ಅಮೇರಿಕಕ್ಕೆ ಜಯ ಸಿಕ್ಕಿದೆ. ರಾಷ್ಟ್ರರಕ್ಷಣಾರ್ಥವಾಗಿ ಎಂದು ಗ್ರೀಸಿಗೆ ಹೊಸದಾಗಿ ಯುದ್ಧ ಸಾಮಗ್ರಿಗಳನ್ನು ಕಳುಹಿದ ಸುದ್ದಿ ಬಂದಿದೆ. ಆದರೂ ಅಲ್ಲಲ್ಲಿ ಅರಾಜಕತೆ ನಡೆದೇ ಇದೆಯಂತೆ. ತುರ್ಕಿ ಮತ್ತು ಗ್ರೀಸ್ ಎರಡಕ್ಕೂ ನೆರವೀಯಬೇಕೆಂಬ ಅಮೇರಿಕದ ಠರಾವಿನಂತೆ ಈಗ ಪ್ರತಿನಿತ್ಯ ಅವಶ್ಯಕ ಸಹಾಯಗಳನ್ನು ಒಂದಸಕಳುಹಲಾಗುತ್ತಿದೆ.

## ಪಾಲಿಸ್ತಾನದ ಶಾಂತಿ ಪ್ರಯತ್ನ

ರೋಡ್ಸಿನಸಲ್ಲಿ ಸಂ. ರಾ. ಸಂಘ ಕಳಿಸಿದ ಮಧ್ಯಸ್ಥರಾದ ಬರ್ನದೊತ್ತೆಯವರು ಅರಬ ಮತ್ತು ಯೆಹೂದಿ ಮುತ್ಸದ್ದಿಗಳೊಡನೆ ಸಂಧಾನಕ್ಕೆ ಅವಶ್ಯಕವಾದ ಸುದ್ದಿಯನ್ನು ಸಂಗ್ರಹಿಸುವರೆಂದು ಹೇಳಲಾಗುತ್ತದೆ.

ಬರ್ನದೊತ್ತೆಯವರೊಡನೆ ಮಾತನಾಡಿದ ನಂತರ ಇಸ್ರೇಲಿನ ಮುಖ್ಯ ಮಂತ್ರಿ ಡೇವಿಡ್ ಬೆನ್‌ಗುರಿಯನ್ನನು ಅರಬರು ಎಷ್ಟು ಹೊತ್ತಿಗೆ ಮೇಲೆ ಬಿದ್ದಾರೆಂಬ ನಂಬಿಗೆಯಿಲ್ಲದುದರಿಂದ ಯೆಹೂದಿಗಳು ಯುದ್ಧಕ್ಕೆ ಸದಾಸಿದ್ಧರಿರಬೇಕೆಂದು ಎಚ್ಚರಿಕೆ ಕೊಟ್ಟನು.

ಅರಬ ರಾಜಕೀಯ ಸಮಿತಿಯು ಪಾಲಿಸ್ತಾನದ ವಿಭಜನೆ ಮತ್ತು ಯೆಹೂದಿ ರಾಜ್ಯ ಇವೆರಡನ್ನೂ ಮೊದಲಿನಂತೆಯೇ ವಿರೋಧಿಸುತ್ತಿರುವದಾಗಿ ತಿಳಿಯುತ್ತದೆ. ಸಂಧಾನ ಯಶಸ್ವಿಯಾಗದಿದ್ದರೆ ಪುನಃ ಯುದ್ಧ ಸಾಗಿಸುವೆವೆಂದು ಅರಬರು ಗರ್ಜಿಸುತ್ತಾರೆ.

ಪಾಲಿಸ್ತಾನದ ಅರಬ ಸೈನಿಕರ ಆರೈಕೆಗಾಗಿ ಹೈದರಾಬಾದಿನಿಂದ ವೈದ್ಯಕೀಯ ಸಹಾಯಕರ ಗುಂಪೊಂದು ಅಲ್ಲಿಗೆ ಹೋಗಲಿದೆ.

## ಇಂಡೋಚೀನದ ಹೋರಾಟ

ಇಂಡೋಚೀನದಲ್ಲಿ ಫ್ರೆಂಚ್ ಪ್ರಭಾವಕ್ಕೊಳಗಾದ ಹೊಸ ಸರಕಾರವು ಸ್ಥಾಪಿತವಾದುದು ಸ್ಪಷ್ಟವಿದೆ. ಹಿಂದಿನ ಚಕ್ರವರ್ತಿ ಬಾವುದಾಯಿಯನ್ನು ಒಳಗೆ ತೆಗೆದುಕೊಂಡುದು ಸುವಿದಿತವಿದೆ. ಆದರೆ ಅವನ ಸಹಿಗೆ ಅರ್ಥವಿಲ್ಲವೆಂದೂ ಫ್ರೆಂಚರ ಈ ಕಪಟ ತಂತ್ರಕ್ಕೆ ಬಲಿಬೀಳಕೂಡದೆಂದೂ ತನ್ನ ಜನರಿಗೆ ಸಾರಿ ಡಾ. ಹೋಚಿಮಿನ್ನರು ಹೋರಾಟವನ್ನು ಕಡೆಯತನಕ ಮುಂದೆ ಸಾಗಿಸುವುಗಾಗಿ ಹೇಳಿದರು. ಬಾಂಕಾಕಿನಲ್ಲಿಯ ಇಂಡೋಚೀನೀಯರು ತಾವು ಫ್ರೆಂಚ್ ಒಕ್ಕೂಟದೊಳಗೆ ಇಂಡೋಚೀನ ಉಳಿವ ಒಪ್ಪಂದವನ್ನು ಮಾನ್ಯಮಾಡುವುದಿಲ್ಲವೆಂದೂ ಡಾ. ಹೋಚಿಮಿನ್ನರಿಗೆ ಬೆಂಬಲ ಕೊಡುವೆವೆಂದೂ ಹೇಳಿದುದಾಗಿ ವಾರ್ತೆಯಿದೆ. ಬೆಂದ ಮನೆಗೆ ಹಿರಿದದ್ದೇ ಲಾಭವೆಂದು ಇಂಡೋಚೀನೀಯರಲ್ಲಿ ಒಡಕು ಹುಟ್ಟಿಸಿ ತಮ್ಮ ಪ್ರಭಾವಕ್ಕೊಳಗಾದ ಇಂಡೋಚೀನೀ ಪ್ರಜಾರಾಜ್ಯವನ್ನು ಸ್ಥಾಪಿಸಿದ ಫ್ರೆಂಚರ ದಾರಿ ಅಲ್ಲಿ ನಿಷ್ಕಂಟಕವಾಯಿತೆಂದು ತಿಳಿದರೆ ತಪ್ಪಾಗುತ್ತದೆ. ಹೋಚಿಮಿನ್ನರ ಕಿರುಕುಳ ಯುದ್ಧ ಹಾಗೇ ಸಾಗುವುದಾದರೆ ಇಂಡೋಚೀನದ ಸಮಸ್ಯೆ ಸದ್ಯಕ್ಕಂತೂ ಮುಗಿದಂತಾಗುವುದಿಲ್ಲ.

## ಅಂತಾರಾಷ್ಟ್ರೀಯ ತರುಣ ಪರಿಷತ್ತು

ಮುಂದಿನ ಅಂತಾರಾಷ್ಟ್ರೀಯ ತರುಣ ಪರಿಷತ್ತು ಲಂಡನ್ನಿನಲ್ಲಿ ನಡೆಯಲಿರುವದು. ಅತಿಥಿಗಳಿಗೆ ಉಳಿದುಕೊಳ್ಳಲು ವಿಶ್ವವಿದ್ಯಾಲಯದ ಕಟ್ಟಡಗಳನ್ನು ಕೊಡಲಾಗುವದು. ಶ್ರೀಮತಿ ವಾಲ್ಟರ್ ಇಲಿಯಟ್ಟರು ಅತಿಥ್ಯ ಸಮಿತಿಯ ಅಧ್ಯಕ್ಷೆ. ತರುಣರಿಗೆ ಲಂಡನ್ನಿಗೆ ಬಂದಾಗ ಇಂಗ್ಲಂಡಿನ ನಾನಾ ಸಂಘ ಸಂಸ್ಥೆಗಳನ್ನು ಸಂದರ್ಶಿಸುವ ಅನುಕೂಲವನ್ನು ಮಾಡಿಕೊಡಲಾಗುವದು. ಅವರ ನಿಯುಕ್ತ ಕಾರ್ಯಕ್ರಮ ೨ ದಿನ ನಡೆಯುವದು; ಅದಾದ ಮೇಲೆ ಸಂದರ್ಶನದ ಪ್ರಯಾಣ. "ಇಂದಿನ ಬ್ರಿಟನ್ನಿನ ಯುವಕರು" ಎಂಬ ಪುಸ್ತಕವೊಂದನ್ನು ಪರಿಚಯಕ್ಕಾಗಿ ಇಂಗ್ಲೀಷು ತರುಣರು ಪ್ರಕಟಿಸಲಿದ್ದಾರೆ.

## ಜರ್ಮನಿಯ ಪ್ರತ್ಯೇಕೀಕರಣ

'ಪ್ರತ್ಯೇಕ ನಾಣ್ಯ ಚಲಾವಣೆಯ ಸುಧಾರಣೆಯನ್ನು ಪಶ್ಚಿಮದ ಮಿತ್ರರು ಮಾಡಿದ ಇಂದಿನಿಂದ ಜರ್ಮನಿಯ ವಲಯಗಳ ಪ್ರತ್ಯೇಕೀಕರಣ ಸಂಪೂರ್ಣವಾಯಿತು' ಎಂದು ಜರ್ಮನಿಯಲ್ಲಿರುವ ರಶಿಯದ ಸೇನಾಧಿಪತಿ ಸೊಕೊಲೋವಸ್ಕಿ ಪ್ರಕಟಿಸಿದನು. ಪರಿಸ್ಥಿತಿಗೆ ತಕ್ಕ ಕಾರ್ಯವನ್ನು ಕೂಡಲೆ ಮಾಡಲಾಗುವದೆಂದೂ ಅವನು ಸಾರಿದನು.

ಈ ಸಾರಿಕೆಯ ಮರು ನಿಮಿಷದಲ್ಲಿ ರಶಿಯದ ಅಧಿಕಾರಿಗಳು ರಶಿಯನ್ನರ ಮತ್ತು ಆಂಗ್ಲೋ ಅಮೇರಿಕನ್ನರ ಮೇಲ್ವಿಚಾರಣೆಗೊಳಗಾದ ಪೂರ್ವ ಮತ್ತು ಪಶ್ಚಿಮ ಜರ್ಮನಿಗಳ ನಡುವೆ ವಾಹನ ಸಂಚಾರ, ಹಳಿಯ ನೋಟು ನಾಣ್ಯಗಳ ಆಯಾತ ಇವುಗಳನ್ನು ಪ್ರತಿಬಂಧಿಸುವ ಆಜ್ಞೆಯನ್ನು ಪ್ರಕಟಮಾಡಿದರು. ಟೆಲಿಫೋನು ಮತ್ತು ಟಪ್ಪಾಲು ಸಂಚಾರಕ್ಕೆ ಈ ಆಜ್ಞೆ ಅಡ್ಡಬಂದಿಲ್ಲ.

ಆಂಗ್ಲ–ಫ್ರೆಂಚ್–ಅಮೇರಿಕನ್ ಅಧಿಕಾರಿಗಳು ಪಾಟ್ಸಡ್ಯಾಂ ಒಪ್ಪಂದವನ್ನು ಮುರಿದು ಜರ್ಮನಿಯ ಪಶ್ಚಿಮ ವಲಯದಲ್ಲಿ ಹೀಗೆ ಪ್ರತ್ಯೇಕ ನಾಣ್ಯಪದ್ಧತಿಯನ್ನು ಜಾರಿಗೆ ತಂದುದು ಜರ್ಮನ್ ಹಿತಕ್ಕೆ ಭಂಗ ತಂದು ಉತ್ತರಾಷ್ಟ್ರಪ್ರಯುಗಳಿಗೆ ಸೌಲಭ್ಯ ಕಲ್ಪಿಸಿಕೊಟ್ಟತೆಂದೂ ಸೋಕೋವಸ್ಕಿ ಸಾರಿದನು.

## ಫ್ರಾನ್ಸಿನಲ್ಲಿ ಸಾರ್ವತ್ರಿಕ ಸಂಪು

ಪ್ಯಾರಿಸ್ಸಿನ ನಗರಭವನದೆದುರು ಪೋಲೀಸರನ್ನು ಕ್ರುದ್ಧ ಜನರು ಬಾಟಲಿಗಳಿಂದ ಹೊಡೆದರು. ಇಡೀ ಫ್ರಾನ್ಸಿನಲ್ಲಿ ೧ ಗಂಟೆಯಕಾಲ ಕಮ್ಯುನಿಸ್ಟ ಪ್ರಭಾವಕ್ಕೊಳಗಾದ ಕೆಲಸಗಾರರ ಮಹಾಸಂಘದ ೩೦ ಲಕ್ಷ ಜನರು ಸಂಪನ್ನು ಆಚರಿಸಿದರು. ಎಷ್ಟೋ ಕಡೆ ಪೋಲೀಸರಿಗೂ ಕೂಲಿಕಾರರಿಗೂ ಘರ್ಷಣೆ ಸಂಭವಿಸಿತು. ನಗರದ ಅಧಿಕಾರಿಗಳಿಗೆ ತಮ್ಮ ತೊಂದರೆಗಳನ್ನು ನಿವೇದಿಸಲು ೪–೫ ಸಾವಿರ ನಗರ ಸಭೆಯ ಕೆಲಸಗಾರರು ಪ್ರಯತ್ನಿಸಿದರು. ನೂರಕ್ಕೆ ೨೦ ರಷ್ಟು ಸಂಬಳ ಏರಿಸಬೇಕೆಂದು ಅವರ ಬೇಡಿಕೆ. ಕ್ಲೆರ್‌ಮಂಟ್ ಫರೆಂಡ್ ಎಂಬಲ್ಲಿ ಸಂಪು ನಡೆದಾಗ ಅಂತರಿಕ ಆಡಳಿತ ಮಂತ್ರಿಯಾದ ಜೂಲ್ಸ್ ಮಾಕರು ಕೂಲಿಕಾರರನ್ನು ಕ್ರೂರವಾಗಿ ನಡೆಸಿಕೊಂಡರೆಂಬುದು ಅವರ ದೂರು. ಇದೇ ಜಗಳದ ಪ್ರಾರಂಭ. ತಂತಿ ಟೆಲಿಫೋನು ಶಾಖೆಯೊಂದನ್ನು ಬಿಟ್ಟರೆ ಉಳಿದ ಎಲ್ಲ ಕಾರ್ಯಾಲಯಗಳಲ್ಲೂ ಕೂಲಿಕಾರರು ಸಂಪನ್ನು ನೆರವೇರಿಸಿದರು. ಇದರ ಮೇಲೆ ಮಂತ್ರಿಯೊಬ್ಬ ಶಾಸನಸಭೆಯಲ್ಲಿ ಹೇಳಿಕೆ ಕೊಟ್ಟಾಗ ಕಮ್ಯುನಿಸ್ಟ ಮತ್ತು ಇತರ ಮಂತ್ರಿಗಳಲ್ಲಿ ಹೊಡೆದಾಟ ಸಂಭವಿಸಿತು.

## ಮಾರ್ಶಲ್ ಯೋಜನೆಯ ಸ್ವೀಕಾರ

ಅಮೇರಿಕದ ಶಾಸನಸಭೆಯ ಸಂಯುಕ್ತ ಸಭೆಯಲ್ಲಿ ಯುರೋಪಿನ ಪುನಾರಚನೆಗೆ ಮಾರ್ಶಲ್ಲರು ಯೋಚಿಸಿದ ಮೊಬಲಗಿಗೆ ಒಪ್ಪಿಗೆಯ ಮುದ್ರೆ ಬಿದ್ದಿತು. ಆ ಹಣವನ್ನು ಯಾವ ಬಗೆಯಿಂದ ಬಳಸಬೇಕೆಂಬದನ್ನು ಅಧ್ಯಕ್ಷ ಟ್ರೂಮನ್ನರಿಗೆ ಬಿಟ್ಟುಕೊಡಲಾಯಿತು.

ಇಂಡೋಚೀನದ ಡಾ. ಹೋಚಿಮಿನ್ನರು

೧೫ ತಿಂಗಳ ವರೆಗೆ ೫೩೦ ಕೋಟಿ ಚಿಲ್ಲರೆ ಡಾಲರನ್ನು ತೆಗೆದಿಡಲಾಯಿತು. ಅವಶ್ಯಬಿದ್ದರೆ ಅಧ್ಯಕ್ಷ ಟ್ರೂಮನ್ನರು ಆ ಹಣವನ್ನು ೧೨ ತಿಂಗಳೊಳಗೆ ಖರ್ಚು ಮಾಡಬಹುದೆಂದು ಅಧಿಕಾರ ಕೊಡಲಾಗಿದೆ.

ಯೋಜನೆಯ ಮೊಬಲಗಿನಲ್ಲಿ ನೂರಕ್ಕೆ ೨೫ ರಷ್ಟು ಕಡಿಮೆ ಮಾಡಬೇಕೆಂದು ಈ ವರೆಗೆ ಸಭೆಯಲ್ಲಿ ತಕರಾರು ನಡೆದಿತ್ತು; ಅದೀಗ ಮುಕ್ತಾಯವಾದಂತಾಯಿತು.

ಯುರೋಪಿನ ವಿವಿಧ ರಾಷ್ಟ್ರಗಳಲ್ಲಿಯ ಕಮ್ಯುನಿಸ್ಟರು ಮಾರ್ಶಲ ಯೋಜನೆಯ ವಿರುದ್ಧ ಆಂದೋಲನವನ್ನಾರಂಭಿಸಲು ಸದ್ಯದಲ್ಲೆ ಗುಪ್ತ ಸಭೆ ಸೇರಿಸುವವರಿದ್ದಾರೆಂದು ತಿಳಿಯುತ್ತದೆ. ರಶಿಯವನ್ನು ಬಿಟ್ಟು ಯುರೋಪಿನ ಇತರ ೮ ಪ್ರಮುಖ ರಾಷ್ಟ್ರಗಳಲ್ಲಿ ೭೦ ಲಕ್ಷ ಕಮ್ಯುನಿಸ್ಟರಿದ್ದಾರೆ.

# ವಿಚಿತ್ರವಿಶ್ವ

### ತಲೆಶಿಕಾರಿ

ಪೆರು ದೇಶದಲ್ಲಿಯ ಉಷ್ಣ ವಲಯದ ಕಾಡುಗಳಲ್ಲಿ ಜೀವಾರೋ ಎಂಬ ರೆಡ್ ಇಂಡಿಯನ್ನರಿದ್ದಾರೆ. ಅವರ ಗುಂಪುಗಳಲ್ಲಿ ಪರಸ್ಪರ ಯುದ್ಧ ನಡೆದರೆ ಕೊಂದ ಶತ್ರುವಿನ ತಲೆಯನ್ನು ಗೆದ್ದವನು ಒಯ್ದು ಮಂತ್ರ ತಂತ್ರ ಔಷಧಾದಿಗಳಿಂದ ಅದನ್ನು ಕೆಡದಂತೆ ಸಂಸ್ಕಾರಕ್ಕೊಳಿಸಿ ಇಡುತ್ತಾನೆ. ಆ ಕ್ರಮ ಹೀಗೆ:

ಕಡಿದ ರುಂಡದ ಭುಜದ ಮೂಳೆಗಳನ್ನು ಬೇರ್ಪಡಿಸಲಾಗುವುದು. ಆಗ ಕುತ್ತಿಗೆಯ ಹಿಂದೆ ಕಿಂಡಿತೆರೆಯುವವದು; ಅದರ ಮೂಲಕ ತಲೆಯ ಬುರುಡೆಯನ್ನು ಎಳೆದು ತೆಗೆಯಲಾಗುವುದು. ಮುಖದೊಳಗಿನ ಮಾಂಸ ಮತು ಚರ್ಮಗಳನ್ನು ಬೇರ್ಪಡಿಸಲಾಗುವುದು; ಅನಂತರ ಆ ಚರ್ಮವನ್ನು ಮರದ ಹಿಡಿಕೆಯೊಂದರಲ್ಲಿಟ್ಟು ಎಳೆದು ವಿಸ್ತರಿಸಲಾಗುತ್ತದೆ. ಆ ಬಳಿಕ ಅದನ್ನು ಬಿಸಿನೀರಿನಲ್ಲಿ ಅದ್ದಿ ತೆಗೆದು ಕುತ್ತಿಗೆಯಲ್ಲಿ ಇರಿಕೆಯೊಂದನ್ನು ಸುರಿದು ಒಳಗೆ ಕಾದ ಕಲ್ಲುಗಳನ್ನು ತುಂಬಲಾಗುವುದು. ಅದರ ಮೇಲೆ ಬಿಸಿ ಮಳಲನ್ನು ತುಂಬಿ ಅತ್ಯಂತ ಕುಸಿದು ಕಾಯಿಸಿ ರುಂಡದ ಆಕೃತಿಯನ್ನು ಕಿರಿದು ಮಾಡಲಾಗುವುದು. ಗೆದ್ದಾತನು ತನ್ನ ಕೈಚಳಕದಿಂದ ಮುಖದ ಚರ್ಮವನ್ನು ತಿದ್ದಿ ಬಾಯಿಗೆ ಒತ್ತುಹಿಡಿಕೆಯನ್ನು ಹಾಕಿ ಮೊದಲಿನಂತೆ ಇರುವ ಮುಖಭಂಗಿಯನ್ನು ರೂಪಿಸುವನು. ಆಗ ಆ ರುಂಡ ಕ್ರಮೇಣ ಒಣಗಿ ಕೊಳೆಯದೆ ಉಳಿವ ಸ್ಥಿತಿಗೆ ಬರುವುದು.

ದಕ್ಷಿಣ ಅಮೇರಿಕದ ಪ್ರಜಾರಾಜ್ಯಗಳ ಎಷ್ಟೋ ಕಾಯಿದೆಗಳನ್ನು ರಚಿಸಿ ಈ ರುಂಡವನ್ನು ಬೇಟೆಯಾಡುವ ಪದ್ಧತಿಯನ್ನು ನಿಲ್ಲಿಸಿವೆ. ಆದರೆ ಈಗಲೂ ಸಂಶೋಧಕರ ಬೇಡಿಕೆಯಿಂದ ಪ್ರೋತ್ಸಾಹಗೊಂಡ ಕೆಲವು ಕಾಡುಜನರು ತಲೆಶಿಕಾರಿ ಮಾಡಿ ಅದನ್ನು ಮೇಲಿನಂತೆ ಒಣಗಿಸಿ ಮಾರುವುದುಂಟು.

\+ + +

ಸಹರಾ ಮರುಭೂಮಿಯು ೩೦ ಲಕ್ಷ ಚದುರ ಮೈಲಿನಷ್ಟಿದೆ.

\+ + +

ನಾಲ್ಕು ಬ್ರಿಟಿಶ ರೇಲ್ವೆ ದಾರಿಗಳ ದೂರ ೧೯೦೦೦ ಮೈಲಿಗಿಂತ ಹೆಚ್ಚಿದೆ.

\+ + +

ಮೊದಲನೆಯ ಸಂಪೂರ್ಣ ಖಗ್ರಾಸ ಸೂರ್ಯಗ್ರಹಣವು ಕ್ರಿ. ಪೂ. ೨೧೫೮ ರಲ್ಲಿ ಚೀನದಲ್ಲಿ ಕಾಣಿಸಿತು.

\+ + +

ಒಳ್ಳೆಯ ಓಟಗಾರನು ಜೋರಾಗಿ ಹೊಡೆದರೆ ಬಿಲಿಯರ್ಡ್ ಚೆಂಡು ಗಂಟೆಗೆ ೨೫ ಮೈಲು ವೇಗದಿಂದ ಓಡುತ್ತದೆ.

\+ + +

ಇಂಗ್ಲೆಂಡಿನಲ್ಲಿ ಬಹಳ ಕಾಲದಿಂದ ನಡೆದುಕೊಂಡು ಬಂದ ಫಾರ್ದಿಂಗ್ ನಾಣ್ಯವು ಒಮ್ಮೆ ಬೆಳ್ಳಿಯಲ್ಲೂ, ಆ ಮೇಲೆ ತಾಮ್ರದಲ್ಲೂ, ಆ ಬಳಿಕ ಬ್ರಾನ್ಸ್ ಲೋಹದಲ್ಲೂ ಮುದ್ರಿತವಾಗಿದೆ.

# ಭಾರತದ ಪ್ರಥಮ ಹಿಂದಿ ಗವ್ಹರ್ನರ ಜನರಲ್

## ಚಕ್ರವರ್ತಿ ರಾಜಗೋಪಾಲಾಚಾರ್ಯರ ಅಧಿಕಾರ ಸ್ವೀಕಾರ

## ಕೊನೆಯ ಬ್ರಿಟಿಶ ಗವ್ಹರ್ನರ ಜನರಲ್‌ರ ನಿರೋಪ

ಭಾರತದ ನಿಯೋಜಿತ ಗವರ್ನರ ಜನರಲ್ ಶ್ರೀ. ಚಕ್ರವರ್ತಿ ರಾಜಗೋಪಾಲಾಚಾರ್ಯರು ತಾ. ೨೦ ಕ್ಕೆ ವಿಶೇಷ ವಿಮಾನ ಮೂಲಕ ಕಲ್ಕತ್ತೆಯಿಂದ ಬೆಳಗಿನ ೪ ಕ್ಕೆ ಹೊಸದಿಲ್ಲಿಗೆ ಆಗಮಿಸಿದರು. ಇವರನ್ನು ಸ್ವಾಗತಿಸಲೆಂದೇ ಎನ್ನುವಂತೆ ಇವರು ಬರುವ ಮುನ್ನ ಸಣ್ಣ ಮಳೆಯ ನೆಳಕಾಗಿ ವಸುಂಧರೆ ಮಿಂದು ಹಸಿರುಡುಪಿನ ಸಡಗರದಲ್ಲಿ ನಿಂತಿದ್ದಳು. ಭಾರತದ ಮುಖ್ಯ ಮಂತ್ರಿ ಪಂ. ಜವಾಹರಲಾಲರು ಘಟನಾ ಸಮಿತಿಯ ಅಧ್ಯಕ್ಷ ಶ್ರೀ. ರಾಜೇಂದ್ರ ಪ್ರಸಾದರು ಇವರಂತೆ ಸೈನ್ಯ, ನೌಕಾ, ವಿಮಾನ ಶಾಖೆಗಳ ಉಚ್ಚಾಧಿಕಾರಿಗಳು ಬಂದು ಶ್ರೀ. ಚಕ್ರವರ್ತಿ ರಾಜಗೋಪಾಲಾಚಾರ್ಯರನ್ನು ರಾಜಗಾಂಭೀರ್ಯದಿಂದ ಸ್ವಾಗತಿಸಿದರು. ರಾಜಾಜಿಯವರ ಜಾತಕ ಬರೆದವರು ಪುರಾಣ ಕಾಲದ ಶ್ರೀರಾಮಕೃಷ್ಣರ ಶ್ರೀ-ಶಂಕರಾಚಾರ್ಯರ ಶ್ರೀರಾಮಾನುಜಾಚಾರ್ಯರ ಜನ್ಮಕಾಲದಲ್ಲಿದ್ದ ಗ್ರಹಮಾನಗಳೇ ಇದ್ದುದರಿಂದ ಈ ಮಗು ತನ್ನ ದೇಶದಲ್ಲಿ ಅತ್ಯಂತ ಉಚ್ಚಸ್ಥಾನ ಪಡೆಯುವದು ಎಂದೂ ಆದರೆ ಅನೇಕ ಕಷ್ಟನಷ್ಟಗಳಿಗೆ ಗುರಿಯಾಗಬೇಕಾಗುವದು ಎಂದೂ ಭವಿಷ್ಯ ಹೇಳಿದ್ದರಂತೆ. ಅದು ಇಂದು ಫಲಿಸಿತೆನ್ನಬಹುದಾಗಿದೆಯಲ್ಲ.

### ಅಧಿಕಾರ ಸ್ವೀಕಾರ

ತಾ. ೨೧ ಸೋಮವಾರ ಬೆಳಗಿನ ೧೦॥ ಗಂಟೆಗೆ ಸರಿಯಾಗಿ ಶ್ರೀ. ಚಕ್ರವರ್ತಿ ರಾಜಗೋಪಾಲಾಚಾರ್ಯರು ಹಿಂದುಸ್ತಾನದ ಗವರ್ನರ ಜನರಲ್ಲರೆಂದು ಅಧಿಕಾರ ಸ್ವೀಕರಿಸಿದರು. ಅವರ ಪ್ರತಿಜ್ಞಾವಿಧಿಯು ದರಬಾರ ಭವನದಲ್ಲಿ ಜರಗಿತು. ಹಿಂದುಸ್ತಾನದ ಮುಖ್ಯ ನ್ಯಾಯಾಧೀಶರಾದ ಸರ್. ಹೀರಾಲಾಲ ಕಾನಿಯಾ ಅವರು ಪ್ರತಿಜ್ಞೆ ಮಾಡಿಸಿದರು. ೩೧ ತೋಫುಗಳ ವಂದನೆ ಮತ್ತು ಬ್ಯಾಂಡ ವಾದನದಿಂದ ಅಧಿಕಾರ ಸ್ವೀಕಾರವು ಸಾರಲ್ಪಟ್ಟಿತು. ಆಗ ಬ್ಯಾಂಡಿನವರು 'ಗಾಡ ಸೇವ ದಿಕಿಂಗ' ಮತ್ತು 'ಜನಗಣಮನ ಅಧಿನಾಯಕ ಜಯಹೇ' ನುಡಿಸಿದರು. ಹೊಸ ಗವರ್ನರರ ಧ್ವಜವು ನೀಲವರ್ಣದ್ದಿದ್ದು ಅದರಲ್ಲಿ ಮೂರು ಅಶೋಕ ಸಿಂಹಗಳ ಉತ್ತಮಾಂಗಗಳೂ 'ಸಿ. ಆರ್.' ಎಂಬ ಅಕ್ಷರಗಳೂ ಉಂಟು.

ಅಧಿಕಾರ ಸ್ವೀಕಾರದ ಕಾಲಕ್ಕೆ ದರಬಾರ ಭವನವು ನೂರಾರು ಪ್ರತಿಷ್ಠಿತರಿಂದ ತುಂಬಿತ್ತು. ಮುಖ್ಯ ಮಂತ್ರಿ ಪಂ. ಜವಾಹರಲಾಲರು ಮತ್ತು ಉಳಿದ ಮಂತ್ರಿಗಳು ಗವರ್ನರ ಜನರಲ ರಾಜಾಜಿಯವರ ಎಡಪಕ್ಕದಲ್ಲಿ ಮಂಡಿಸಿದ್ದರು. ಘಟನಾ ಸಮಿತಿಯ ಅಧ್ಯಕ್ಷ ಡಾ. ರಾಜೇಂದ್ರ ಪ್ರಸಾದರು, ವಿದೇಶದ ರಾಯಭಾರಿಗಳು, ಸಂಸ್ಥಾನದ ನರೇಂದ್ರರು, ಸಿವಿಲ ಮತ್ತು ಮಿಲಿಟರಿ ಶಾಖೆಯ ಉಚ್ಚ ಅಧಿಕಾರಿಗಳು ಯಥೋಚಿತ ಸ್ಥಾನಗಳಲ್ಲಿ ಆಸೀನರಾಗಿದ್ದರು.

### ರಾಜಾಜಿಯ ಭಾಷಣ

ಅಧಿಕಾರ ಸ್ವೀಕರಿಸಿದ ನಂತರ ರಾಜಾಜಿ ಸಮಯೋಚಿತ ಚಿಕ್ಕ ಭಾಷಣ ಮಾಡಿ ಲೋಕಾಸ್ಸಮಸ್ತಾಸ್ಸುಖಿನೋಭವಂತು ಎಂಬುದೇ ಭಾರತದ ಧ್ಯೇಯ ವಾಕ್ಯವೆಂದೂ ಶಾಂತಿ ಪಾಠವೇ ಭಾರತವು ಜಗಕ್ಕೆ ಜೀರುವ ಶ್ರೇಷ್ಠ ಸಂದೇಶವೆಂದೂ ಜಾತೀಯತೆಯ ಹೀನ ಭಾವವು ಎಲ್ಲರ ಮನದಿಂದೂ ತೊಲಗಬೇಕೆಂದೂ ನುಡಿದರು. ಶಕ್ತಿಯ ಬಲದಿಂದ ಸುಖ ಸಾಧಿಸುವೆನೆಂಬುದು ಶುದ್ಧ ಭ್ರಮೆಯೆಂದೂ ಶಾಂತಿ ಸೌಹಾರ್ದದ ತಳಹದಿಯ ಮೇಲಿದ್ದ ಸುಖ ಚಿರಕಾಲ ಬಾಳತಕ್ಕಂತಹದೆಂದೂ ಶಾಂತಿ ಭಂಗವಾಗಗೊಡದಂತೆ ಎಲ್ಲರೂ ವರ್ತಿಸಬೇಕೆಂದೂ ನಿವೇದಿಸಿದರು. ಪ್ರಪಂಚದ ಎಂಟೂ ದಿಕ್ಕುಗಳಿಂದ ತಮಗೆ ಬಂದ ಶುಭ ಸಂದೇಶಗಳ ಆಶೀರ್ವಾದಗಳ ಮಾತೆತ್ತಿ, ಈ ರಾಷ್ಟ್ರನೌಕೆ ನಡೆಸಲು ನನ್ನನ್ನಿಟ್ಟ ಈ ಅಧಿಕಾರದಲ್ಲಿ ಕುಳ್ಳಿಸಿದ ನಿಮ್ಮೆಲ್ಲರ ಸೇವೆಗೆ ಸಾಕಷ್ಟು ಶಕ್ತಿಯನ್ನು ಒದಗಿಸಲು ಈ ಶುಭಾಶಯಗಳು ನೆರವಾಗಲಿ ಎಂದು ಹಾರೈಸಿದರು.

### ಮೌಂಟಬ್ಯಾಟನ್ನರ ಬೀಳ್ಕೊಡುವ ಸಂದೇಶ

ಹಿಂದುಸ್ತಾನದಿಂದ ಹೊರಡುವ ಮುನ್ನ ತಾ. ೨೦ ರ ರಾತ್ರಿ ೮ ಕ್ಕೆ ಲಾರ್ಡ ಮೌಂಟಬ್ಯಾಟನ್ನರು ಬೀಳ್ಕೊಡುವ ಭಾಷಣಮಾಡಿ ಈ ಬಗೆಯ ಸಂದೇಶ ಕೊಟ್ಟರು.

ನಾವು ಇಲ್ಲಿ ಕಳೆದ ೧೫ ತಿಂಗಳುಗಳು ಚಿರಸ್ಮರಣೀಯವಾಗಿವೆ. ನೌಕಾಪಡೆಯ ಕೆಲಸ ಬಿಟ್ಟು ಹಿಂದುಸ್ತಾನದ ಕೊನೆಯ ವೈಸರಾಯನಾಗಲು ನನಗೆ ಆಜ್ಞೆ ಬಂದಾಗ ನನ್ನ ಹೊಸ ಹೊಣೆಯ ಕಾರ್ಯದ ಬಗ್ಗೆ ದಿಗಿಲುಗೊಂಡಿದ್ದೆ. ಆದರೆ ಇಲ್ಲಿಯ ರಾಜಕೀಯ ಮುಂದಾಳುಗಳು ಹಿಂದುಸ್ತಾನದ ಸಮಸ್ಯೆ ಬಿಡಿಸಲು ನಿರ್ಧರಿಸಿದ್ದುಕಂಡು ಆಶಾಕಿರಣ ಮೂಡಿದವಲ್ಲದೆ ಅವರೆಲ್ಲರ ಸಹಕಾರ ಪರಸ್ಪರ ವಿಶ್ವಾಸಗಳ ಸಹಾಯದಿಂದ ಎಲ್ಲ ಸಮಸ್ಯೆಗಳನ್ನು ಸುಗಮವಾಗಿ ಬಿಡಿಸಲು ಶಕ್ಯವಾಯಿತು.

ಆಗಸ್ಟ ೧೪–೧೫ ರ ಮಧ್ಯರಾತ್ರಿ ಸ್ವತಂತ್ರ ಹಿಂದುಸ್ತಾನದ ಪ್ರಥಮ ಘಟನಾತ್ಮಕ ಗವ್ಹರ್ನರ ಜನರಲ್ ಆಗಬೇಕೆಂದು ನನಗೆ ಆಮಂತ್ರಣ ಬಂದಿತು. ಆಗ ನನಗಾದ ಆನಂದಕ್ಕೆ ಮೇರೆಯೇ ಇರಲಿಲ್ಲ. ಆ ಅಧಿಕಾರವನ್ನು ಈ ವರೆಗೆ ಬೆಳೆಸಿ ನನ್ನನ್ನು ಗೌರವಿಸಲಾಯ್ತು. ನನ್ನ ನಂತರ ನನ್ನ ಸ್ಥಳಕ್ಕೆ ನನ್ನ ಪರಮಮಿತ್ರರಾದ ರಾಜಾಜಿ ನೇಮಿತರಾದುದು ಆನಂದದ ವಿಷಯ. ಈ ಪದಕ್ಕೆ ಅವರಿಗಿಂತ ಯೋಗ್ಯರು ಸಿಕ್ಕುವದು ಕಷ್ಟ.

ಹಿಂದುಸ್ತಾನದೆದುರು ಅನೇಕ ಗಂಭೀರ ಸಮಸ್ಯೆಗಳಿವೆ. ಒಮ್ಮೆಲೇ ಸ್ವಾತಂತ್ರ್ಯ ಪಡೆದ ಯಾವದೇ ರಾಷ್ಟ್ರವು ಇಂಥ ಸಮಸ್ಯೆಗಳನ್ನು ಎದುರಿಸಲೇಬೇಕಾಗುವದು. ಇಡೀ ಜಗತ್ತೇ ಇಂದು ಗಂಭೀರ ಪರಿಸ್ಥಿತಿಯಲ್ಲಿದೆ. ಜಗತ್ತಿನ ೧/೬ ದಷ್ಟಿರುವ ಹಿಂದುಸ್ತಾನದ ಜನಸಂಖ್ಯೆಯು ಈ ಸಮಸ್ಯೆಗಳನ್ನು ಮತ್ತಷ್ಟು ಜಟಿಲಗೊಳಿಸಿದ್ದುಂಟು. ಆದರೂ ಚಾಣಾಕ್ಷರಾದ ಕುಶಾಗ್ರ ಬುದ್ಧಿಯ ಹಿಂದುಸ್ತಾನದ ಮುಂದಾಳುಗಳು ಇವನ್ನೆಲ್ಲ ಸಹಜವಾಗಿ ಬಿಡಿಸಬಲ್ಲರೆಂಬ ಆತ್ಮವಿಶ್ವಾಸವಿದೆ ನನಗೆ. ಹಿಂದುಸ್ತಾನದ ಭೂಸಂಪತ್ತು ಖನಿಜಸಂಪತ್ತು ಅಪಾರವಾಗಿದೆ. ಎಲ್ಲಕ್ಕೂ ಮಿಗಿಲಾದ ಸಂಪತ್ತೆಂದರೆ ಜನಸಂಪತ್ತು. ಕೋಟ್ಯಾನುಕೋಟಿ ಜನರು ತಾಂತ್ರಿಕ ಶಿಕ್ಷಣಪಡೆದು ಸಂಶೋಧನ ಬುದ್ಧಿಯ ಪ್ರಭಾವದಿಂದ ಅಖಂಡ ಜಗತ್ತಿನ ಕಲ್ಯಾಣವನ್ನೇ ಸಾಧಿಸಬಲ್ಲರು.

ನಿಮ್ಮ ಘಟನೆಯಲ್ಲಿ ದೊಡ್ಡ ಧ್ಯೇಯಗಳ ನಿರೂಪಣೆಯಾದ ಮಾತ್ರಕ್ಕೆ ಕಾರ್ಯ ಮುಗಿಯಲಿಲ್ಲ. ಅವುಗಳನ್ನು ಸಾಧಿಸುವಾಗ ಅಡ್ಡ ಬರುವವರನ್ನೆಲ್ಲ ಎದುರಿಸಿ ಅವರನ್ನು ಬಗ್ಗುಬಡಿಯುವ ಮನೋನಿರ್ಧಾರ ಬೇಕು. ನಾವು ಎಲ್ಲಿ ಹೋದರೂ ಭಾರತೀಯರ ಸ್ನೇಹ ವಿಶ್ವಾಸಗಳನ್ನು ಹೆಮ್ಮೆಯಿಂದ ಸ್ಮರಿಸಿಕೊಳ್ಳುತ್ತೇವೆ. ಭಾರತದ ಕಲ್ಯಾಣದಲ್ಲಿ ನಮಗೆ ತುಂಬ ಆಸ್ಥೆಯಿದೆ.

### ದಿಲ್ಲಿ ನಾಗರಿಕರಿಂದ ಗೌರವ

ದಿಲ್ಲಿ ನಗರ ಸಭೆಯವರು ತಾ. ೨೦ ರಂದು ಗಾಂಧಿ ಮೈದಾನದಲ್ಲಿ ಲಾರ್ಡ ಮತ್ತು ಲೇಡಿ ಮೌಂಟಬ್ಯಾಟನ್ನರಿಗೆ ಮಾನಪತ್ರ ಅರ್ಪಿಸಿ ಬೀಳ್ಕೊಟ್ಟರು. ೧ ಲಕ್ಷಕ್ಕಿಂತ ಹೆಚ್ಚು ಜನ ಈ ಸಮಾರಂಭಕ್ಕೆ ಆಗಮಿಸಿದ್ದರು. ಲಾರ್ಡ ಮೌಂಟಬ್ಯಾಟನ್ನರು ಉತ್ತರ ರೂಪವಾಗಿ ಕೆಲವು ಮಾತುಗಳನ್ನು ಹಿಂದಿಯಲ್ಲಿ ಹೀಗೆ ಹೇಳಿದರು.

"ದೆಲ್ಲಿಕೇನಿವಾಶಿಯೋ, ಮೈ ಔರ್ ಮೇರಿ ಶ್ರೀಮತೀ ಬಹುತ ಖುಶ್ ಹೈ ಕೇ ಇಸ್ ಸಮಯಪರ ಇತನೀಬಡೀ ಪಾರ್ಟಿ ಜಮಾ ಹುಯೀ ಹೈ. ಹಮನೋನೋ ಆಪಸೇ ಬಿಧಾ ಹೋತೇಹೈ. ಇಸ್ ಜುದಾಯೀಸೇ ಹಮ ದೋನೋಕೋ ಬಡಾ ರಂಜ ಹೈ. ಲೇಕಿನ್ ಆಪಕಿ ದೋಸ್ತೀ ಔರ ಪ್ರೇಮ ಹಮೇಶಾ ಹಮಾರೇ ದಿಲ್‌ಮೇ ರಹೇಗಾ. ಮೈ ಹಿಂದಿ ನಹಿ ಜಾನತಾಹುಂ. ಇಸ್‌ಲಿಯೆ ಮೈ ಪೂರಾ ಭಾಷಣ ಹಿಂದಿಮೇ ನಹಿಕರಸಕತಾ. ಬಾಕಿ ಅಂಗ್ರೇಜಿಮೇ ಬೋಲೂಂಗಾ. ಮೈ ಔರ್ ಶ್ರೀಮತಿ ಆಪಕಾ ಧನ್ಯವಾದ ಕರತೇ ಹೈ. ಈಶ್ವರ ಆಪಕಿ ಸಹಾಯತಾ ಕರೇ." ಎಂದು ತಾವು ಹಿಂದುಸ್ತಾನದಿಂದ ಬಹಳ ಭಾರವಾದ ಹೃದಯದಿಂದ ಅಗಲುತ್ತೇವೆಂದು ಹೇಳಿ ಆಕಾಶವಾಣಿಯಲ್ಲಿ ಹೇಳಿದ್ದನ್ನೇ ಮತ್ತೆ ಒತ್ತಿ ಇಂಗ್ಲೀಷಿನಲ್ಲಿ ಹೇಳಿದರು.

ಆ ಮೇಲೆ ಪಂ. ಜವಾಹರರು ಮಾತನಾಡಿ ಲಾರ್ಡ ಮತ್ತು ಲೇಡಿ ಮೌಂಟಬ್ಯಾಟನ್ನರು ಭಾರತಕ್ಕೆ ಸಲ್ಲಿಸಿದ ಸೇವೆ ಅಮೋಘವೆಂದು ಕೊಂಡಾಡಿ ಇಲ್ಲಿ ನೆರೆದ ಜನಸ್ತೋಮವೇ ಅವರ ಸ್ನೇಹ ವಿಶ್ವಾಸಗಳಿಗೆ ಸಾಕ್ಷಿಯೆಂದು ನುಡಿದರು. ಮಾನಪತ್ರವನ್ನು ಒಂದು ಬೆಳ್ಳಿಯ ಕರಂಡಕದಲ್ಲಿಟ್ಟುಕೊಡಲಾಯ್ತು. ಅದರ ಮೇಲೆ ಹಿಂದುಸ್ತಾನದ ನಕಾಶವಿದೆ. ಕರಂಡಕದ ಮಧ್ಯದಲ್ಲಿ ೧೫ ಇಂಚು ಎತ್ತರದ ಮ. ಗಾಂಧಿಯವರ ದಸ್ತಿದಂತ ಮೂರ್ತಿ ಇದೆ. ಕರಂಡಕದ ಇನ್ನೊಂದು ಬದಿಗೆ ಮಹಾತ್ಮರ ಬಗ್ಗೆ ಪಂ. ಜವಾಹರಲಾಲರು ತೆಗೆದ "ಅವರು

ಪೂಜ್ಯ ರಾಜಾಜಿಯವರು

ಕುಳಿತುದೇ ದೇವಾಲಯವಾಯ್ತು, ನಡೆದುದೇ ಪುಣ್ಯಭೂಮಿಯಾಯ್ತು" ಎಂಬ ಉದ್ಗಾರಗಳನ್ನು ಕೆತ್ತಲಾಗಿದೆ.

### ಮೊಗಲ ಉದ್ಯಾನದಲ್ಲಿ ಸತ್ಕಾರ ಕೂಟ

ಭಾರತದ ಮುಖ್ಯ ಮಂತ್ರಿಗಳಾದ ಪಂ. ಜವಾಹರಲಾಲರು ಮತ್ತು ಉಳಿದ ಮಂತ್ರಿಗಳು ಲಾರ್ಡ ಮತ್ತು ಲೇಡಿ ಮೌಂಟಬ್ಯಾಟನ್ನರಿಗಾಗಿ ತಾ. ೨೦ ರ ರಾತ್ರಿ ಭೋಜನ ಸಮಾರಂಭ ಏರ್ಪಡಿಸಿದ್ದರು. ನವನಿಯೋಜಿತ ಗವರ್ನರ ಜನರಲರಾದ ಚಕ್ರವರ್ತಿ ರಾಜಗೋಪಾಲಾಚಾರ್ಯರೇ ಮೊದಲಾದ ನೂರಾರು ಉಚ್ಚ ಅಧಿಕಾರಿಗಳು ವಿದೇಶದ ರಾಯಭಾರಿಗಳು ಆಮಂತ್ರಿತರಾಗಿದ್ದರು.

ಇದೇ ಸಮಯದಲ್ಲಿ ಲಾರ್ಡ ಮೌಂಟಬ್ಯಾಟನ್ನರು ಬ್ರಿ. ಅರಸರ ಸೊತ್ತಾದ ಹತ್ತು ಬಂಗಾರದ ತಟ್ಟೆಗಳನ್ನು ಬ್ರಿಟಿಶ ಜನತೆಯ ಸ್ನೇಹದ ಗುರುತೆಂದು ಹಿಂದುಸ್ತಾನದ ಜನತೆಗೆ ಹಾಗೂ ಸರಕಾರಕ್ಕೆ ಕಾಣಿಕೆಯಾಗಿ ಕೊಟ್ಟರು. ಪಂ. ನೆಹರು ಅವರು ಲಾರ್ಡ ಮತ್ತು ಲೇಡಿ ಮೌಂಟಬ್ಯಾಟನ್ನರಿಗೆ ಬೆಳ್ಳಿಯ ಹರಿವಾಣವನ್ನು ಕೊಟ್ಟರು. ಅದರ ಮೇಲೆ ಕೇಂದ್ರ ಸರಕಾರದ ಮಂತ್ರಿಗಳ ಹಾಗೂ ಪ್ರಾಂತಗಳ ಗವ್ಹರ್ನರರ ಅಂಕಿತಗಳನ್ನು ಕೆತ್ತಲಾಗಿದೆ.

ಮೊಗಲ ಉದ್ಯಾನದಲ್ಲಿ ಲಾರ್ಡ ಮತ್ತು ಲೇಡಿ ಮೌಂಟ ಬ್ಯಾಟನ್ನರನ್ನು ಗೌರವಿಸಲು ದೊಡ್ಡ ಸತ್ಕಾರ ಕೂಟವೇರ್ಪಟ್ಟಿತ್ತು. ೬ ಸಾವಿರಕ್ಕಿಂತ ಹೆಚ್ಚು ಅತಿಥಿಗಳು ಆಗಮಿಸಿದ್ದರು. ಉದ್ಯಾನವನ್ನು ಈ ಸಮಯಕ್ಕಾಗಿ ವಿವಿಧ ವರ್ಣಗಳ ವಿದ್ಯುದ್ದೀಪಗಳಿಂದ ಅಲಂಕರಿಸಲಾಗಿತ್ತು. ಕಾರಂಜಿಗಳು ಬಗೆ ಬಗೆಯ ಬಣ್ಣಗಳ ನೀರನ್ನು ಚಿಮ್ಮಿ ಚಿಮುಕಿಸುತ್ತಿದ್ದವು. ಮೌಂಟ ಬ್ಯಾಟನ್ನರಿಗೆ ಎಲ್ಲರೊಡನೆ ಕೈಕುಲಿಕಿಸುವದು ಆಗದೆ ಎಲ್ಲರ ಮಧ್ಯದಲ್ಲಿ ತಿರುಗಾಡಿ ನಿರೋಪ ತೆಗೆದುಕೊಂಡರು.

### ಮಂತ್ರಿಮಂಡಳದ ಸಂದೇಶ

ಹಿಂದುಸ್ತಾನದ ಮಂತ್ರಿಮಂಡಳವು ಮೌಂಟಬ್ಯಾಟನ್ನರಿಗೆ ಸಂದೇಶ ಕಳಿಸಿ ಅದರಲ್ಲಿ ಅವರ ಅಮೋಘ ಕಾರ್ಯವನ್ನು ನೆನೆದು ಅವರಿಗೆ ಅಭಿನಂದನ ಸಲ್ಲಿಸಿದೆ ಮತ್ತು ಅವರ ಮುಂದಿನ ಆಯುಷ್ಯಕ್ಕೆ ಉಜ್ವಲ ಯಶ ಕೋರಿದೆ. ಇದಕ್ಕೆ ಮೌಂಟಬ್ಯಾಟನ್ನರು ಉತ್ತರ ಕೊಟ್ಟು 'ನಮ್ಮ ಕುಟುಂಬದ ಐತಿಹಾಸಿಕ ಕಾಗದಪತ್ರಗಳ ಸಂಗ್ರಹಾಲಯದಲ್ಲಿ ನಿಮ್ಮ ಸಂದೇಶವನ್ನು ಬಹು ಜತನದಿಂದ ಕಾಯ್ದಿಡುವೆವು' ಎಂದೂ ಹಿಂದುಸ್ತಾನವು ಅತ್ಯಂತ ಉತ್ಕರ್ಷ ಹೊಂದಲೆಂದೂ ಅಂದಿದ್ದಾರೆ.

ಲಾರ್ಡ ಮತ್ತು ಲೇಡಿ ಮೌಂಟಬ್ಯಾಟನ್ನರು ತಾ. ೨೧ ಬೆಳಗಿನ ೮॥ ಗಂಟೆಗೆ ವಿಮಾನ ಮೂಲಕ ಲಂಡನ್ನಿಗೆ ಹೊರಟರು.

---

ಬಾಲಪ್ರಪಂಚ

### ಅಂಕೆಗಳ ಡೊಂಬರಾಟ

ಮಗು,

ಈ ವಾರ ನಿನಗೆ ಕೆಲವು ಅಂಕೆಗಳ ಡೊಂಬರಾಟವನ್ನು ತೋರಿಸಬೇಕೆಂದಿದ್ದೇನೆ. ಈ ಅಂಕೆಗಳ ಆಟ ಬಹಳ ದೊಡ್ಡ ತಮಾಷೆಯಿದೆ. ಇಲ್ಲಿ ಕೆಲವನ್ನು ನೋಡುವಿಯಂತೆ:

೩×೩೭ = ೧೧೧
೬×೩೭ = ೨೨೨
೯×೩೭ = ೩೩೩
೧೨×೩೭ = ೪೪೪
೧೫×೩೭ = ೫೫೫
೧೮×೩೭ = ೬೬೬
೨೧×೩೭ = ೭೭೭
೨೪×೩೭ = ೮೮೮
೨೭×೩೭ = ೯೯೯

× × ×

೧೪೨೮೫೭ ಎಂಬುದು ಒಂದು ವಿಚಿತ್ರ ಸಂಖ್ಯೆ. ಅದಕ್ಕೆ ಒಂದರಿಂದ ಆರರ ವರೆಗೆ ಯಾವ ಅಂಕೆಯಿಂದ ಗುಣಿಸಿದರೂ ಉತ್ತರದಲ್ಲಿ ೧, ೪, ೨, ೮, ೫, ೭ ಇವೇ ಅಂಕೆಗಳು ಬೇರೆ ಬೇರೆ ಸ್ಥಾನಗಳಲ್ಲಿ ಕಾಣಿಸಿಕೊಳ್ಳುತ್ತವೆ. ನೋಡು:

೧೪೨೮೫೭×೨ = ೨೮೫೭೧೪
೧೪೨೮೫೭×೩ = ೪೨೮೫೭೧
೧೪೨೮೫೭×೪ = ೫೭೧೪೨೮
೧೪೨೮೫೭×೫ = ೭೧೪೨೮೫
೧೪೨೮೫೭×೬ = ೮೫೭೧೪೨

ಮತ್ತು ಅದೇ ಅಂಕೆಗೆ ೭ ರಿಂದ ಗುಣಿಸಿದರೆ:

೧೪೨೮೫೭×೭ = ೯೯೯೯೯೯

× × ×

ಮೇಲಿನದಕ್ಕಿಂತಲೂ ದೊಡ್ಡ ಇನ್ನೊಂದು ಸಂಖ್ಯೆಯಲ್ಲಿ ಇದೇ ಗುಣವನ್ನು ಕಾಣಬಹುದು. ಆ ಸಂಖ್ಯೆ

೫೨೬೩೧೫೭೮೯೪೭೩೬೮೪೨೧೦

ಈ ಅಂಕೆಗೆ ೧ ರಿಂದ ೯ ರ ವರೆಗಿನ ಯಾವದೇ ಅಂಕೆಯಿಂದ ಗುಣಿಸಿದರೂ ಅವೇ ಅಂಕೆಗಳು ಒಂದಲ್ಲ ಒಂದು ಬಗೆಯಾಗಿ ಉತ್ತರದಲ್ಲಿ ಅವತರಿಸುತ್ತವೆ. ಬೇಕಾದರೆ ಗುಣಿಸಿ ನೋಡಿರಿ.

× × ×

೧೧ ರ ಅಂಕೆಯಲ್ಲಿಯೂ ನೀವು ತಮಾಷೆಯನ್ನು ಕಾಣಬಹುದು:

೧೧×೧೧ = ೧೨೧
೧೧×೧೧೧ = ೧೨೨೧
೧೧×೧೧೧೧ = ೧೨೨೨೧
೧೧×೧೧೧೧೧ = ೧೨೨೨೨೧

ಇದೇ ಪ್ರಕಾರವಾಗಿ ಎಷ್ಟು ಮಾಡಿ ನೋಡಿದರೂ ಅತ್ತಿತ್ತ ೧ ಮತ್ತು ನಡುವೆ ೨ ರ ಸಾಲು ನಿಲ್ಲುತ್ತದೆ!

× × ×

ಇನ್ನೊಂದು ವಿಚಿತ್ರ ನೋಡಿರಿ:

೧೧×೧೧ = ೧೨೧
೧೧೧×೧೧೧ = ೧೨೩೨೧
೧೧೧೧×೧೧೧೧ = ೧೨೩೪೩೨೧
೧೧೧೧೧×೧೧೧೧೧ = ೧೨೩೪೫೪೩೨೧

ಹೀಗೆ ಉತ್ತರದಲ್ಲಿ ಅಂಕೆಗಳು ಒಮ್ಮೆ ಏರಿ ಅದೇ ಪ್ರಕಾರ ಇಳಿಯುತ್ತವೆ.

— ಮಾಮಾ

---

ಪಾಕಿಸ್ತಾನ ಅಕೌಂಟೆಂಟ ಜನರಲ ಕಚೇರಿಯ ಸುಮಾರು ೭೦೦ ನಾನ್‌ಗೆಜೆಟೆಡ್ ನೌಕರರು ಕೆಲಸಕ್ಕೆ ರಾಜೀನಾಮೆ ಕೊಟ್ಟಿರುವದಾಗಿ ತಾ. ೨೯ ಕ್ಕೆ ಜಾಹೀರು ಮಾಡಿದರು. ಅವರ ಬೇಡಿಕೆಗಳು ದೊರಕದ್ದರಿಂದ ಹೀಗೆ ರಾಜೀನಾಮೆ ಕೊಟ್ಟರಂತೆ.

# ಸ್ಟಾಲಿನ್ನರ ಹಿರಿ-ಹಂಚಿಕೆ

## ೨ ವರ್ಷ, ೩ ತಿಂಗಳು ೨೧ ದಿನದ ಯೋಜನೆ !




ಸ್ಟಾಲಿನ್ನರ ವಿಶ್ವವಿಜಯದ ನಕಾಶೆ

ಜಗತ್ತಿನ ಪ್ರಮುಖ ರಾಷ್ಟ್ರಗಳಲ್ಲೆಲ್ಲ ಇಂದು "ಯುದ್ಧಸನ್ನಿ" ಹಬ್ಬಿದೆ. ಇದಕ್ಕೆ ಒಬ್ಬರು ಇನ್ನೊಬ್ಬರನ್ನ ದೂರುತಿದ್ದಾರೆಯೆ ಹೊರತು ಯಾರೂ ಇದನ್ನು ತಣಿಸುವ ಗೊಡವೆಗೆ ಹೋಗುತ್ತ ಇಲ್ಲ. ಮುಂಬರುವ ಹೋರಾಟದಲ್ಲಿ ಮುಖ್ಯ ಸ್ಪರ್ಧಾಳುಗಳೆಂದರೆ ರಶಿಯಾ ಮತ್ತು ಅಮೇರಿಕೆ. ಅಮೇರಿಕೆಯ ಹತ್ತಿರ ಅಣು ಬಾಂಬುಗಳೇ ಮೊದಲಾದ ಪ್ರಚಂಡ ಅಸ್ತ್ರಗಳಿವೆ. ಅದರ ಔದ್ಯೋಗಿಕ ಶಕ್ತಿಯೂ ಅಗಾಧವಾಗಿದೆಯೆಂಬದು ಜಗಜ್ಜನಿತ. ಆದರೂ ರಶಿಯನ್ನರು ಹೊರಜಗತ್ತಿಗೆ ಶೀರ ಒರಟೆಂದು ಕಾಣಿಸುವ ರೀತಿಯಲ್ಲಿ ನಡೆದುಕೊಳ್ಳುತ್ತ ಅಮೇರಿಕೆಯ ಕ್ರೋಧಕ್ಕೆ ಉತ್ತೇಜನ ಕೊಡುತಿದ್ದಾರೆ. ತಮ್ಮ ಮಾರ್ಕ್ಸವಾದದ ಮತಾಂಧತೆಯಿಂದ ಅವರು ಅಮೇರಿಕೆಯ ಸಂಗಡ ಯುದ್ಧವೊದಗಿದರೆ ಬರುವ ಅನಾಹುತದತ್ತ ಕಣ್ಣು ಮುಚ್ಚಿದ್ದಾರೆಯೆ ? ಅಥವಾ ಅವರು ಅದನ್ನೆದರಿಸುವ ಸಿದ್ಧತೆಯನ್ನು ನಡೆಸಿದ್ದಾರೆಯೆ ?

ರಶಿಯನ್ ಮುಂದಾಳು ಮೃತ್ತೇನೇ ಆಗಿದ್ದರೂ ದಡ್ಡರಂತೂ ಅಲ್ಲ. ಈಚೆಗಿನ ವರೆಗೆ ಸೋವಿಯಟ್ ಸೈನ್ಯದಲ್ಲಿ ಸೇನಾಪತಿಯಾಗಿದ್ದು ಈಗ ಪ್ಯಾರೀಸಿನಲ್ಲಿ ವಾಸಿಸುತ್ತಿರುವ ಜನರಲ್ ಚಾಪರಿಜರು, ರಶಿಯಾ-ಅಮೇರಿಕೆಗಳ ನಡುವೆ ನಡೆದ "ಭೇದ ಯುದ್ಧ" ಮುಗಿದು ಈಗಾಗಲೆ "ದಂಡ ಯುದ್ಧ" ವೇ ಆರಂಭವಾಗಿದೆಯೆಂಬ ಮಾತು ರಶಿಯನ್ನರಿಗೆ ಎಂದೋ ಮನವರಿಕೆಯಾಗಿದೆಯೆಂದು ಬರೆದಿದ್ದಾರೆ. ಝೆಕೊಸ್ಲೊವಾಕಿಯದ ಘಟನೆಗಳೂ ಚೀನದ ಮತ್ತು ಗ್ರೀಸಿನ ಅಂತರ್ಯುದ್ಧಗಳೂ ಜಾಗತಿಕ ಹೋರಾಟವಲ್ಲಿ ಮುಕ್ತಾಯವಾಗದಿರವೆಂದು ಅವರಿಗೆ ಗೊತ್ತೇ ಇದೆ. ಅವರು ಅದಕ್ಕಾಗಿ ಸನ್ನಾಹವನ್ನೂ ಮಾಡುತಿದ್ದಾರೆ.

ರಶಿಯನ್ನರಿಗೆ ಯುದ್ಧ ಬೇಕಾಗಿದೆಯೆಂದಲ್ಲ. ೧೯೫೨ ರ ವರೆಗೆ ತಮ್ಮ ಅತಿ ಸಾಮಾನ್ಯ ಸನ್ನಾಹ ಕೂಡ ಮುಗಿಯುವದಿಲ್ಲವೆಂದು ಅವರು ಬಾಯ್ಬಿಟ್ಟು ಒಪ್ಪಿಕೊಳ್ಳುತ್ತಾರೆ. ಸಾಧ್ಯವಿದ್ದರೆ ಕೊನೆಯ ವರೆಗೂ ಯುದ್ಧವಿಲ್ಲದೆಯೆ ಸಾಗಬೇಕೆಂದು ಅವರ ಬಯಕೆ. ನಿಜವಾಗಿ, ಯುದ್ಧವೇ ಅನಿವಾರ್ಯವಾದರೆ ಅದು ತಮ್ಮ ರಾಜ್ಯನೀತಿಯ ಸೋಲೆಂದೇ ಅವರು ಪರಿಗಣಿಸುವರು. ಆದರೆ ಯುದ್ಧವನ್ನು ನಿವಾರಿಸುವ ಬಗೆ ಅವರಿಗೆ ಕಾಣದಾಗಿದೆ.

ಆದುದರಿಂದ ಯುದ್ಧ ಬಂದರೆ ತಾವೇ ಮೊದಲ ಹೊಡೆತ ಹೊಡೆಯಬೇಕೆಂದು ಅವರು ಹವಣಿಸಿದ್ದಾರೆ. ಕಳೆದ ಮಹಾಯುದ್ಧದಿಂದ ಅವರು ಕಲಿತ ದೊಡ್ಡ ಪಾಠವಿದು: ಎದುರಾಳಿ ಕೈಯೆತ್ತುವ ವರೆಗೆ ಕಾಯ್ದು ಫಲವಿಲ್ಲ.

### ಮೂರು ಅವಸ್ಥೆಗಳು

ಪಾಶ್ಚಿಮಾತ್ಯ ರಾಷ್ಟ್ರಗಳ ವಿರುದ್ಧ ತಮ್ಮ ಯುದ್ಧ ಮೂರು ಅವಸ್ಥೆಗಳಲ್ಲಿ ನಡೆಯುವದೆಂದು ರಶಿಯನ್ನರು ಗುಣಿತ ಹಾಕಿದ್ದಾರೆ.

ಮೊದಲನೆಯ ಅವಸ್ಥೆಯಲ್ಲಿ ಇಡಿ ಪಶ್ಚಿಮ ಯುರೋಪನ್ನು ರಶಿಯಾ ಆಕ್ರಮಿಸುವದು. ಮೊನ್ನಿನ ಸೈನ್ಯ ವಿಸರ್ಜನೆಯ ನಂತರವೂ ರಶಿಯದಲ್ಲಿ ೫೫ ಲಕ್ಷ ಸೈನಿಕರಿದ್ದಾರೆ. ಅದರಿಂದ ಪಶ್ಚಿಮ ಯುರೋಪಿನ ಆಕ್ರಮಣಕ್ಕೆ ೩ ವಾರಗಳಿಗಿಂತ ಹೆಚ್ಚು ಕಾಲ ಹಿಡಿಯಲಾರದೆಂದು ಅವರ ಗ್ರಹಿಕೆ.

ಎರಡನೆಯ ಅವಸ್ಥೆಯಲ್ಲಿ ಇಕ್ಕವಲಿನ ದಾಳಿ. ಸ್ಪೇನ್-ಪೋರ್ತುಗಾಲಗಳನ್ನಾಕ್ರಮಿಸಿ ಜಿಬ್ರಾಲ್ಟರ ದಾಟಿ ಉತ್ತರ ಆಫ್ರಿಕೆಯ ಮೇಲೆ ಏರಿಹೋಗುವದೊಂದು; ಅತ್ತ ಇರಾಣ, ಇರಾಕ, ಸೀರಿಯಗಳನ್ನು ದಾಟಿ ಸುಯೇಜ ಕಾಲುವೆಯತ್ತ ನುಗ್ಗುವದಿನ್ನೊಂದು. ಸ್ಪೇನಿನಲ್ಲಿ ಫ್ರಾಂಕೋನ ಆಡಳಿತಕ್ಕೆ ವಿರೋಧ ಪ್ರಬಲವಾಗಿರುವದರಿಂದ ವಿಮಾನದಿಂದ ಸೈನ್ಯವನ್ನಿಳಿಸಿಯೆ ಅದನ್ನಾಕ್ರಮಿಸಬಹುದೆಂದು ರಶಿಯನ್ ಸೇನಾಪತಿಗಳು ನಂಬಿದ್ದಾರೆ. ಆ ಮೇಲೆ ಉತ್ತರ ಆಫ್ರಿಕೆಯಲ್ಲಿಳಿದು ಡಾಕಾರ ಬಂದರವನ್ನು ಹಿಡಿಯಬೇಕು. ಅಲ್ಲಿಂದ ದಕ್ಷಿಣ ಅಮೇರಿಕೆಯನ್ನು ನಡುಗಿಸಲು ಸಾಧ್ಯವುಂಟು. ತುರ್ಕಿಯನ್ನು ಆಕ್ರಮಿಸುವ ಗೋಜಿಗೆ ಹೋಗದೆ



ಸ್ಟಾಲಿನ್

ಸುಯೇಜನ್ನೇ ಕಸಿದುಕೊಂಡರೆ ಭೂಮಧ್ಯ ಸಮುದ್ರದ ಎರಡೂ ಮಹಾದ್ವಾರಗಳು ಮುಚ್ಚಿದಂತಾಗಿ ಅದರೊಳಗಿರುವ ರಾಷ್ಟ್ರಗಳ ಬಲ ನಿರರ್ಥಕವಾಗುವದು. ಇಷ್ಟಕ್ಕೆ ಎರಡನೆ ಅವಸ್ಥೆ ಮುಗಿದಂತಾಗುವದು. ೧೦೦ ದಂಡುಗಳನ್ನು ಯುರೋಪಿನ ಆಕ್ರಮಿತ ಪ್ರದೇಶಗಳ ರಕ್ಷಣೆಗಿಟ್ಟು ಮೂರನೆ ಅವಸ್ಥೆಯತ್ತ ಸಾಗಬಹುದು. ಇದರಲ್ಲಿ ೫೦ ದಂಡುಗಳು ಝೆಕ್, ಬಲ್ಗೇರಿಯನ್ ಹಾಗು ಯುಗೊಸ್ಲಾವ ಸರಕಾರಗಳಿಂದಲೇ ಸಿಗಬಹುದು. ಇದಕ್ಕೆ ಮೂರು ತಿಂಗಳ ಕಾಲ ಸಾಲುವದು.

ಆದರೆ ಮೂರನೆ ಅವಸ್ಥೆ ಮಾತ್ರ ಇನ್ನೂ ದೀರ್ಘಾವಧಿಯ ಯೋಜನೆ. ೩೦೦ ದಂಡುಗಳ ಸಂಗಡ, ಸಾಲದ್ದಕ್ಕೆ ಚೀನಿ ಕಮ್ಯುನಿಸ್ಟರ ಸಹಾಯದಿಂದ ಚೀನದ ಮೇಲೆರಗಬೇಕು. ಇಲ್ಲಿ ಅಮೇರಿಕನರೊಡನೆ ತೀವ್ರತರವಾದ ಕಾಳಗ ನಡೆಸಬೇಕಾಗುವದು. ಇದಕ್ಕೆ ಎರಡು ವರ್ಷಗಳು ಹಿಡಿದಾವು.

ಚೀನದ ಮೇಲೆ ಪ್ರಭುತ್ವವನ್ನು ಸ್ಥಾಪಿಸಿದ ಬಳಿಕ ಅಮೇರಿಕೆ ರಾಜಿ ಪಂಚಾಯಿತಿಗೆ ಒಪ್ಪಬಹುದೆಂದು ರಶಿಯನ್ನರ ನಂಬಿಕೆ. ಬ್ರಿಟನ್ ಒಂದು ಬಿಟ್ಟು ಇಡಿ ಯುರೋಪು, ಮಧ್ಯಪೂರ್ವ, ಉತ್ತರ ಆಫ್ರಿಕೆ, ಚೀನ ಇವು ರಶಿಯನ್ನರಿಗೆ; ಇಂಡೋಚೀನ, ಇಂಡೊನೇಶಿಯ, ಬ್ರಿಟನ್ ಮತ್ತು ಅದರ ವಸಾಹತುಗಳು ಮತು ದಕ್ಷಿಣ ಅಮೇರಿಕೆ ಅಮೇರಿಕನ್ನರಿಗೆ—ಹೀಗೆ ಜಗತ್ತನ್ನು ಎರಡು ಪ್ರಭಾವ ವಲಯಗಳೆಂದು ಪಾಲುಮಾಡಿಕೊಳ್ಳಬಹುದು.



ವಾಸಿಲೆವಸ್ಕಿ: ಸೇನಾಪತಿ ಸಿಬಂದಿಯ ಅಧಿಪತಿ

### ಅಣುಬಾಂಬಿಗೆ ಪ್ರತೀಕಾರ

ಜನರಲ್ ಚಾಪರಿಜರ ಅಭಿಪ್ರಾಯದಲ್ಲಿ, ರಶಿಯನ್ ವೈಜ್ಞಾನಿಕರಿಗೆ ಅಣುಬಾಂಬಿನ ಗುಟ್ಟು ಗೊತ್ತಿದೆ. ಸೈಬೇರಿಯದಲ್ಲಿ ಮೂರು ಕಾರಖಾನೆಗಳನ್ನು ಅಣುಬಾಂಬಿನ ಉತ್ಪಾದನೆಗಾಗಿ ಕಟ್ಟಲಾಗುತ್ತಿದೆ. ಅವುಗಳಲ್ಲೊಂದು ಈಗಾಗಲೆ ಮುಗಿಯುತ್ತ ಬಂದಿದ್ದು ಈ ವರ್ಷಾಂತ್ಯದೊಳಗೆ ಬಾಂಬುಗಳನ್ನು ಸಿದ್ಧಗೊಳಿಸುವದು.

ಅಣು ಕಾರಖಾನೆಗಳಿರುವ ನಿಶ್ಚಿತ ಸ್ಥಾನಗಳನ್ನು ಗೊತ್ತು ಹಚ್ಚಲು ಅಮೇರಿಕನ್ನರು ಆಣವಿಕ ರಾಡಾರಗಳನ್ನು ನಿರ್ಮಿಸಿದ್ದಾರೆ. ತುರ್ಕಿ, ಗ್ರೀಸ್, ಚೀನ ಮೊದಲಾದ ಸಮೀಪದ ರಾಷ್ಟ್ರಗಳಲ್ಲಿ ಅವರು ಠಾಣೆಗಳನ್ನು ರಚಿಸಿಕೊಂಡಿರುವದರಿಂದ ತಮ್ಮ ಬಾಂಬು ಕಾರಖಾನೆಗಳಿಗೆ ಗಂಡಾಂತರವುಂಟೆಂದು ಬಗೆದು ರಾಡಾರ ನಿವಾರಕ ಪ್ರತೀಕಾರಗಳನ್ನು ರಶಿಯನ್ನರು ರಚಿಸುತಿದ್ದಾರೆ. ಈ ಉಪಾಯದಿಂದ ರಾಡಾರ ಯಂತ್ರದ ಗ್ರಹಣಶಕ್ತಿಯನ್ನು ಗಲಿಬಿಲಿ ಮಾಡಿದಿಕ್ಕುಗೆಡಿಸಬಹುದಂತೆ.

ಆದರೆ ಅಣುಯುದ್ಧದ ಇನ್ನೊಂದು ಮುಖ ಸೋವಿಯಟ್ ತಜ್ಞರ ತಲೆ ತಿನ್ನುತಿದೆ. ಸಮುದ್ರದ ಬಳಿ ಎಣ್ಣೆ ಗಣಿಗಳಿರುವಾಗ ಅಣುಬಾಂಬ ಪ್ರಯೋಗದಿಂದ ಗ್ಯಾಸೋಲಿನ್ (ಶುದ್ಧ ಪೆಟ್ರೋಲ) ಸಂಗ್ರಹವನ್ನು ಕೆಲಸಕ್ಕೆ ಬಾರದಂತೆ ಮಾಡುವ ಹೊಸ ಉಪಾಯವನ್ನೊಂದು ಅಮೇರಿಕೆ ಕಂಡು ಹಿಡಿದಿದೆಯೆಂದು ಅವರಿಗೆ ಸಂಶಯವಿದೆ. ರಶಿಯಾದ ಎಣ್ಣೆ ಗಣಿಗಳು, ಮುಖ್ಯವಾಗಿ ಬಾಕುಗಣಿ, ಸಮುದ್ರದ ಬಳಿ ಇದೆ. ಅವು ನಿರರ್ಥಕಗೊಳಿಸಲ್ಪಟ್ಟರೆ ರಶಿಯನ್ ಯುದ್ಧ ಯೋಜನೆಯ ಮೂರನೆ ಅವಸ್ಥೆಯನ್ನು ಕಡೆಹಾಯಿಸುವದೇ ಸಾಧ್ಯವಿಲ್ಲ. ಅದಕ್ಕಾಗಿ ಅಣುಬಾಂಬಿನ ರೇಡಿಯೋ—ಪ್ರಸರಣ ಶಕ್ತಿಯನ್ನು ನಿರೋಧಿಸಲು ಅವರು ಕಶ್ಯಪ ಸಮುದ್ರ ತೀರದಲ್ಲಿ ಪ್ರಚಂಡ ಲೋಹ ಭಿತ್ತಿಯನ್ನು ಕಟ್ಟುತಿದ್ದಾರೆ.



ರೊಕೊಸೊವಸ್ಕಿ: ಪಶ್ಚಿಮ ಸೇನಾ ನಾಯಕ

ಅಣುಬಾಂಬುಗಳಲ್ಲಿ ರಶಿಯನ್ನರು ತುಸು ಹಿಂದುಳಿದಿದ್ದರೂ "ವಿ—ಬಾಂಬು" ಗಳಲ್ಲಿ ಅವರು ಮುಂದೆ ಹೋಗಿದ್ದಾರೆ. ಸೈಬೇರಿಯ ಮತ್ತು ಕಮಚಟಕಗಳಲ್ಲಿ ಸ್ವಯಂ ಪ್ರೇರಿತ ಬಾಂಬುಗಳ ಪ್ರಯೋಗಗಳನ್ನು ಅವರು ಮಾಡಿ, ೯೦೦ ಮತ್ತು ೧೩೦೦ ಮೈಲು ದೂರದಿಂದ ವಿಮಾನವಿಲ್ಲದೆ ನಿರ್ದಿಷ್ಟ ಗುರಿಯ ಮೇಲೆ ಬಾಂಬುಗಳನ್ನು ಕಳಿಸುವಲ್ಲಿ ಯಶಸ್ವಿಗಳಾಗಿದ್ದಾರೆ. ಹೀಗೆ ಕಳಿಸಿದಾಗ ಮೂರು ನಾಲ್ಕು ಮೈಲಿಗಿಂತ ಹೆಚ್ಚು ಗುರಿ ತಪ್ಪುವದಿಲ್ಲವಂತೆ.

— ೧೨ ನೇ ಪುಟಕ್ಕೆ



ಬಲ್ಗಾನಿನ್: ಸೇನಾ ಮಂತ್ರಿ



ಕೊನೇವ: ಭೂಸೈನ್ಯದ ಅಧಿಪತಿ



ಇಸಾಕೋವ: ನೌಕಾಬಲ



ವರ್ಶಿನಿನ್: ವಿಮಾನ ದಳದ ಅಧಿಪತಿ

# ಜನಮತ

# ವಿವಿಧ ಪ್ರಪಂಚ

## ಲಂಚನಿರ್ಮೂಲನ

ಸರಕಾರದ ಲಂಚನಿರ್ಮೂಲನ ಶಾಖೆಯು ಪತ್ತೆ ಹಚ್ಚಿದ ಹಲಕೆಲವು ಪ್ರಕರಣಗಳಲ್ಲಿಯ ಯಶಸ್ಸನ್ನು ಬಹಳ ದೊಡ್ಡದು ಮಾಡಿ ಪ್ರಕಟಿಸಿದ್ದಾರೆ. ಆರೇ ತಿಂಗಳಲ್ಲಿ ಲಂಚಗುಳಿತನ, ಕಳ್ಳಪೇಟೆ ಮುಂತಾದ ಕಾಯದೆಗೆ ವಿರುದ್ಧವಿರುವ ಚಟುವಟಿಕೆಗಳನ್ನು ಬಗ್ಗುಬಡಿಯಲಾಗುವುದೆಂದು ಸ್ವಹಮಂತ್ರಿಗಳಿತ್ತ ಆಶ್ವಾಸನವೆಲ್ಲಿ ಹೋಯಿತು? ಈಗಲೇನಾದರೂ ಅವು ಬಹುಮಟ್ಟಿಗೆ ಕಡಿಮೆಯಾದುದು ಕಂಡು ಬರುವುದೇ? ಈ ವರೆಗೆ ಲಂಚನಿರ್ಮೂಲನ ಶಾಖೆ ಪತ್ತೆ ಹಚ್ಚಿದ ಪ್ರಕರಣಗಳೆಷ್ಟು, ಕೋರ್ಟಿನಲ್ಲಿ ಅವರು ದುರುಪಯೋಗಪಡಿಸಲು ಶಕ್ಯವಾದವುಗಳೆಷ್ಟು, ಇಂಥ ದುರುಪಯೋಗದ ಪ್ರಕರಣಗಳಲ್ಲಿ ಎಷ್ಟು ಜನ ಸರಕಾರೀ ಅಧಿಕಾರಿಗಳಿಗೆ ಯಾವ ಯಾವ ಶಿಕ್ಷೆಗಳನ್ನು ವಿಧಿಸಲಾಯಿತು, ಶಿಕ್ಷೆ ಹೊಂದಿದ ಅಧಿಕಾರಿಗಳ ಸ್ಥಾನಮಾನಗಳಾವುವು?– ಎಂಬೀ ವಿವರಗಳನ್ನು ಜನತೆಗೆ ಸರಕಾರವು ತಿಳಿಯಪಡಿಸಿದ್ದರೆ ಬಹಳ ಉಪಕಾರವಾಗುತ್ತಿತ್ತು. ಅಷ್ಟು ಇಷ್ಟೆಂಬ ಪರಿಮಾಣವಾಚಕಗಳಿಂದ ಸಾಧಿಸಿದ ಅಂಶಗಳನ್ನು ಪ್ರಕಾಶಪಡಿಸುವುದರಿಂದ ವಂಚಿತರಾದೆವೆಂದು ಕೊಂಡ ಜನರು ಸಂಖ್ಯಾವಾಚಕಗಳಿಂದ ವಿಷಯಪರಿಚಯವನ್ನು ಬಯಸಿದರೆ ತಪ್ಪಾಗಲಾರದೆಂದು ನನ್ನ ಭಾವನೆ.

..ಕಾಂಗ್ರೆಸ ಪ್ರಿಯ

* *

## ಕಳ್ಳಪೇಟೆಗೆ ಒಳ್ಳೆಯ ಶಿಕ್ಷೆ

ಪತ್ರಿಕೆಗಳಲ್ಲಿ ಒಬ್ಬ ಕಳ್ಳ ಅರಿವೆ ವ್ಯಾಪಾರಿಗೆ ೧ ವರ್ಷದ ಸಶ್ರಮ ಶಿಕ್ಷೆ ಮತ್ತು ೦ ಲಕ್ಷ ರೂಪಾಯಿ ದಂಡ ವಿಧಿಸಿದರೆಂಬುದನ್ನು ಓದಿ ನನಗೆ ಆಶ್ಚರ್ಯವಾಯಿತು. ಅಂಥ ವ್ಯಾಪಾರಿಗಳು ಇನ್ನು ಮುಂದೆ ವ್ಯಾಪಾರ ವೃತ್ತಿಯನ್ನು ಕೈಕೊಳ್ಳಲಾಗದಂತೆ ಅವರ ಆಸ್ತಿಪಾಸ್ತಿಗಳೆಲ್ಲ ಕರಗುವಷ್ಟು ದಂಡ ಹಾಕುವುದು ಮರಣದಂಡನೆಗಿಂತ ಹೆಚ್ಚು ಪ್ರಯೋಜನಕಾರಿಯಾಗುವುದಿಲ್ಲವೆ? ಇದರಿಂದ ಏನೂ ಅನ್ಯಾಯವಾಗದು. ಏಕೆಂದರೆ, ನೂರು ಜನರನ್ನು ಹಿಡಿದಲ್ಲಿ ೧೦ ಜನರ ಮೇಲೆ ದಾವೆ ಹೂಡುತ್ತಾರೆ, ಆ ಹತ್ತರಲ್ಲಿ ಒಬ್ಬನಿಗೆ ಶಿಕ್ಷೆ ಸಿಗುತ್ತದೆ ಎಂಬುದು ನಿಶ್ಚಿತ ಸತ್ಯವಲ್ಲವೆ?

—ಪಣ್ಣು ಬಿಪ್ಪ ವಸ್ತ್ರದ

## ತ್ರಿಖಂಡ ಪರಿಷತ್ತು

ಭಾರತ, ಇಂಡೋಚೀನ, ಬ್ರಹ್ಮದೇಶ ಮತ್ತು ಸಿಂಹಳಗಳ ಪ್ರತಿನಿಧಿಗಳು ಪ್ಯಾರಿಸ್ಸಿನ ಪರಿಷತ್ತಿಗೆ ಹೋಗಿದ್ದಾರೆ. ಒಟ್ಟು ೧೫೦ ಪ್ರತಿನಿಧಿಗಳು ಆ ಸಭೆಯಲ್ಲಿದ್ದಾರೆ. ಯುರೋಪು ಏಶಿಯ ಮತ್ತು ಆಫ್ರಿಕಗಳ ಜನರ ಹಿತಗಳನ್ನು ಚರ್ಚಿಸುವುದರ ಸಲುವಾಗಿ ಈ ಪರಿಷತ್ತು ಕೂಡಿದೆ.

ಹಿಂದೀ ಪ್ರತಿನಿಧಿಯಾದ ಶ್ರೀ ಫುಲನ್ ಪ್ರಸಾದವರ್ಮರು ಹಿಂದೀ ಸೋಶಲಿಸ್ಟ್ ಪಕ್ಷದ ಸಂಸ್ಥಾಪಕರು. ಹಿಂದೀ ಸೋಶಲಿಸ್ಟ್ ಪಕ್ಷದ ಪರವಾಗಿ ಸಭಿಕರನ್ನು ಅಭಿನಂದಿಸುತ್ತ ಅಮೇರಿಕ ಮತ್ತು ರಶಿಯಗಳ ನಡುವೆ ಈ ಸಭೆ ಮೂರನೆಯದೊಂದು ಗುಂಪನ್ನು ಕಟ್ಟಬೇಕೆಂದೂ ಅದರಿಂದ ಯುದ್ಧಕ್ಕೆ ವಿಘ್ನವೂ ಶಾಂತಿಗೆ ನೆರವೂ ದೊರಕುವುದೆಂದೂ ಅವರು ಹೇಳಿದರು.

ಫ್ರಾನ್ ಆಫ್ರಿಕನ್ ಕಾಂಗ್ರೆಸ್ಸಿನ ಪರವಾಗಿ ಮಾತಾಡುತ್ತ ಶ್ರೀ ಪೀಟರ್ ಅಬ್ರಹಾಮರು ಶ್ವೇತರಿಂದಾಗಿಯೇ ಕೃಷ್ಣವರ್ಣೀಯರನ್ನು ಉದ್ಧರಿಸ ಬೇಕಾದ್ದು ಅಗತ್ಯ ಎಂದರು.

ಹಿಂದೀ ಪ್ರತಿನಿಧಿಯುತ್ತರ ದಕ್ಷಿಣೆಯ ಗುಂಪು ಕಟ್ಟುವ ಮಾತಿಗೆ ಬ್ರಿಟಿಶ ಸ್ವತಂತ್ರ ಕೂಲಿಕಾರ ಪಕ್ಷದ ಪ್ರತಿನಿಧಿಯಾದ ಶ್ರೀ ಜಾನ್ ಎಡ್ವರ್ಡರು ಮುಷ್ಕಿಕೊಟ್ಟರು. ಅವರು ಪರಿಷತ್ತು ಬ್ರಿಟನ್, ಫ್ರಾನ್ಸ್, ಭಾರತ, ಇಂಡೋಚೀನ ಮತ್ತು ಆಫ್ರಿಕದ ಎಡಪಕ್ಷದ ಸೋಶಲಿಸ್ಟರಿಂದ ಕರೆಯಲ್ಪಟ್ಟಿದೆಯೆಂಬ ಅಂಶವನ್ನು ನಿರೂಪಿಸಿದರಲ್ಲದೆ, ಏಶಿಯ ಮತ್ತು ಆಫ್ರಿಕದ ಜನರನ್ನು ಶೋಷಿಸುವುದನ್ನು ನಿಲ್ಲಿಸಬೇಕೆಂದೂ ಯುದ್ಧ ನಡೆಯದಂತೆ ತಡೆಗಟ್ಟಲು ಏಶಿಯ ಯುರೋಪು, ಆಫ್ರಿಕಗಳ ಸ್ವತಂತ್ರ ಜನರು ಪ್ರಯತ್ನಿಸಬೇಕೆಂದೂ ಹೇಳಿದರು.

## ನರನಾರೀ ನಾಟಕ

ಅನಾದಿಕಾಲದಿಂದ ನಾಗರಿಕರಲ್ಲಿ ಹೆಂಗಸರನ್ನು ವಿಶೇಷ ಮರ್ಯಾದೆಯಿಂದ ಕಾಣುವ ರೂಢಿಯಿದೆ. ಕೆಲವು ಕಾಲದಲ್ಲಿ ರಾಜಪುತ್ರಾದಿಗಳಲ್ಲಂತೂ ಅವರನ್ನು ಸಾಕ್ಷಾತ್ ದೇವತೆಯರೆಂದೇ ಗಣಿಸಿದ ನಿದರ್ಶನಗಳಿವೆ. ಅದೇ ರೀತಿಯಲ್ಲಿ ಹಿಂದೀ ನಾಗರಿಕತೆಯಲ್ಲಿ ಹೆಂಗಸು ಗಂಡನನ್ನು ಅನಾದಿಕಾಲದಿಂದ ದೇವರೆಂದು ಪ್ರೀತಿಸುತ್ತ ಬಂದ ರೂಢಿಯಿದೆ. ಈ ಪರಸ್ಪರಪ್ರಶಂಸೆಕಲೆಗಳಲ್ಲಿ ಒಮ್ಮೊಮ್ಮೆ ಅತಿರೇಕಕ್ಕೆ ಮುಟ್ಟಿ ಅಸಹ್ಯವಾಗಿ ತೋರಿದ್ದುಂಟು. ನಾಗರಿಕರೆಂದು ಕರೆದುಕೊಂಡು ಅನಾಗರಿಕತೆಯಿಂದ ನಡೆದುಕೊಂಡವರ ಮಾತನ್ನು ಎತ್ತುವುದೇ ಅನವಶ್ಯ.

ನರನಾರಿಯರು ಹೀಗೆ ಪರಸ್ಪರ ಗೌರವ ಪ್ರೀತಿಗಳನ್ನು ವ್ಯಕ್ತಪಡಿಸುವ ರೂಢಿಯನ್ನು ಕೇವಲ ವಿನೋದಕ್ಕಾಗಿ ಬದಿಗಿಟ್ಟು ಬ್ರಿಟನ್ನಿನ ಆಕಾಶವಾಣಿಯಲ್ಲಿ ಎರಡು ಭಾಷಣಗಳನ್ನು ಮಾಡಿಸಲಾಯಿತು. ಅದರಿಂದ ನರನಾರಿ ಯರು ತಮ್ಮಲ್ಲಿರುವ ಅನೇಕ ದೋಷಗಳನ್ನು ಅರಿತುಕೊಳ್ಳುವ ಸಂದರ್ಭ ದೊರಕಿತು. ಅವು ಬಹುಮಟ್ಟಿಗೆ ಆಂಗ್ಲ ಸಮಾಜಕ್ಕೆ ಅನ್ವಯಿಸುವುವಾದರೂ ಅವುಗಳಲ್ಲಿಯ ಕೆಲ ಅಂಶಗಳು ಸರ್ವಸಾಧಾರಣವಾಗಿಯೂ ಇವೆ.

'ಸ್ತ್ರೀತ್ವಕ್ಕೆ ಶಹಬಾಸಗಿರಿ' ಎಂಬ ಹೆಸರಿನಲ್ಲಿ ಪೀಟರ್ ವ್ಯಾಟ್ಸನು ಮೊದಲು ಭಾಷಣ ಮಾಡಿದನು. ಅದರಲ್ಲಿ ಅವನು ಹೆಂಗಸರು ದಣಿಸುವವರು; ತಮ್ಮ ಮನಸ್ಸನ್ನೇ ಅರಿಯದವರು; ಮಕ್ಕಳಲ್ಲಿ ಆತ್ಯಾಸಕ್ತಿ ತೋರಿ ಅವರು ಎಷ್ಟು ದೊಡ್ಡವರಾದರೂ ಅವರನ್ನು ಚಿಕ್ಕ ಮಕ್ಕಳಂತೆಯೇ ನಡೆಸಿಕೊಳ್ಳಲು ಯತ್ನಿಸುತ್ತಾರೆ, ಅವರ ಖಾಸಗಿ ವಿಚಾರದಲ್ಲೆಲ್ಲ ತಲೆಹಾಕುತ್ತಾರೆ; ಬಟ್ಟೆಯ ಹುಚ್ಚು ಅವರಿಗೆ ಹೆಚ್ಚು, ಮುಖಾಲಂಕಾರ, ಹ್ಯಾಟು ಇತ್ಯಾದಿಗಳ ಬಗ್ಗೆ ಅವರು ಅತಿಭ್ರಮೆ ತೋರುವರು; ವಿಲಾಸದಾಸ್ಯ ಅವರಿಗೇ ಮೀಸಲು; ಗಂಡಂದಿರ ಮನಸ್ಸನ್ನು ತಿಳಿದುಕೊಳ್ಳದೆ ಗಂಡಸರು ತಮ್ಮ ಮೇಲೆ ದುರ್ಜನಾಸಕ್ತಿ ಮಾಡುತ್ತಾರೆಂದು ಗೊಣಗುತ್ತಾರೆ; ಕೆಲವೊಮ್ಮೆ ಅವರು ಬುದ್ಧಿಯಿಲ್ಲದವರಂತೆ ವರ್ತಿಸುತ್ತಾರೆ; ಅವರಷ್ಟು ರಣಹೇಡಿಗಳು ಮತ್ತಾರೂ ಇಲ್ಲ.

ಉಗುರುಗಳಿಗೆ ಬಣ್ಣ ಹಚ್ಚಿಕೊಂಡು ಅಸಹ್ಯ ಮಾಡಿಕೊಳ್ಳುವುದಲ್ಲದೆ, ಚಹದ ಬಟ್ಟಲಿಗೆ ಅಂಟಿಕೊಳ್ಳುವಷ್ಟು ಬಣ್ಣವನ್ನು ತುಟಿಗಳಿಗೆ ಬಳಿದುಕೊಳ್ಳುತ್ತಾರೆ. ಇಷ್ಟಾದರೂ ಅವರು ಗಂಡಸರಿಗೆ ಅಗತ್ಯವಾಗಿ ಬೇಕಾದವರು.

ಅನಂತರ 'ಫೆಮಿನಾ' ಎಂಬ ಉಪನಾಮ ಧರಿಸಿ ಒಬ್ಬಾಕೆ ಗಂಡಸರ ಲೋಪದೋಷಗಳನ್ನು "ಸೃಷ್ಟಿಯೊಡೆಯರು" ಎಂಬ ಹೆಸರಿನ ತನ್ನ ಭಾಷಣದಲ್ಲಿ ವಿವರಿಸಿದಳು. ಗಂಡಸರು ಸ್ವಾರ್ಥಿಗಳು, ನಿರಾದರರು, ಹೆಂಗಸು ತಮಗಾಗಿ ಕಾದಿರಬೇಕೆಂಬವರು, ಹೇಳಿದ್ದೇ ಹೇಳುವವರು, ಜಂಭಗಾರರು, ತಮ್ಮ ಮಕ್ಕಳ ತುಂಟತನಕ್ಕೆ ತಾವು ಹೊಣೆಗಾರರಲ್ಲವೆಂಬವರು, ಸ್ವಚಿಂತನಪರರು, ಪರಂಪರೆಯನ್ನು ಉಲ್ಲಂಘಿಸುವವರು; ಆಟಗಳಲ್ಲಿ ಅತ್ಯಾಸಕ್ತರು, ಹೆಂಡತಿಯರನ್ನು ಮೆಚ್ಚದವರು. ಇಷ್ಟಾದರೂ ಅವರು ಹೆಂಗಸರಿಗೆ ಅಗತ್ಯವಾಗಿ ಬೇಕಾದವರು.

ಮೇಲಿನದು ಮೊದಲನೆಯದರ ಪ್ರತೀಕಾರದಂತಿಲ್ಲವಾದರೂ ಮೂಲದ ವಿರುದ್ಧ ನಕಲಿನ ಶೈಲಿಯಲ್ಲಿ ಕೊನೆಗಂಡಿದೆ. ನರನಾರಿಯರು ಈ ದೂರು ತಮ್ಮ ಮೇಲೆ ಬರದಂತೆ ತಂತಮ್ಮಲ್ಲಿ ನಡೆದುಕೊಂಡರೆ ಸರಿಯಾದ ಹೊಂದಿಕೆಯಿಂದ ಸುಖ ಜೀವನ ನಡೆಸಬಹುದು. ಹಾಗೆ ನಡೆದುಕೊಳ್ಳಲಾರದವರು ಸಮಾಜದಿಂದ ಹೊರಬೀಳಬೇಕಲ್ಲದೆ ಅಲ್ಲೇ ಉಳಿದು ಇತರರಿಗೆ ಉಗುಳಲೂ ನುಂಗಲೂ ಬರದ ತುತ್ತಾಗಬಾರದು ಎಂಬುದು ನಾಗರಿಕ ಮತವಲ್ಲವೆ? ಈ ಭಾಷಣಗಳಲ್ಲಿಯ ಕಡೆಯ ವಾಕ್ಯಗಳನ್ನು ಗಮನಿಸಿದರೆ ಈ ಮತಕ್ಕೆ ಬೆಂಬಲ ಕೊಡದೆ ಗತ್ಯಂತರವಿಲ್ಲವೆನಿಸುವದಿಲ್ಲವೆ?



ಇದು ಒಂದು ಹೊಸ ಹೆಣಿಗೆಯ ಯಂತ್ರ. ಇದನ್ನು ಒಂದು ಬ್ರಿಟಿಶ ವ್ಯಾಪಾರಸಂಸ್ಥೆ ತಯಾರಿಸಿ ಬ್ರಿಟಿಶ ಉದ್ಯಮ ಪ್ರದರ್ಶನಕ್ಕೆ ಕಳುಹಿದೆ. ಅದು ಒಳ ಉಡುಪಿಗೆ ಅಗತ್ಯವಾದ "ಕೆಸ್ರಾ ಲೀರಾ" ಹಾರವನ್ನು ತೆಗೆಯುತ್ತದೆ.

---

ನಾಲ್ವರು ಹಿಂದೀ ಉದ್ದಿಮೆದಾರರು ಸಾಯ್ಕಲ್ ತಯಾರಿಸುವ ಕಾರಖಾನೆಯ ಯಂತ್ರೋಪಕರಣಗಳನ್ನು ಕೊಳ್ಳುವದಕ್ಕಾಗಿ ತಾ. ೧೫ಕ್ಕೆ ಇಂಗ್ಲಂಡಕ್ಕೆ ತೆರಳಿದರು. ಇವರಲ್ಲಿ ಒಬ್ಬರ ಹೆಸರು ಶ್ರೀ ರಸಿಕಲಾಲ ಶಹಾ. ಇವರು ಯೋಜಿಸಿದ ಕಾರಖಾನೆಯನ್ನು ಆಗ್ರಾದಲ್ಲಿ ತೆರೆಯಲಾಗುವದು. ಪ್ರಾರಂಭಿಕ ಬಂಡವಾಳವೆಂದು ೧೦ ಲಕ್ಷ ರೂ. ಗಳನ್ನು ತೊಡಗಿಸಲಾಗುವದು. ಈ ಕಾರಖಾನೆಯಲ್ಲಿ ಪ್ರತಿ ದಿನ ೨೦೦ ಸಾಯ್ಕಲ್ ಸಿದ್ಧವಾಗಬಹುದೆಂದು ಅಂದಾಜಿದೆ.

## ಅಮೇರಿಕದ ಸ್ತ್ರೀಯರು

ಅತಿ ನಾಗರಿಕವೆನಿಸಿದ ಅಮೇರಿಕದ ಅತಿ ಸ್ವತಂತ್ರ ಸ್ತ್ರೀಯರು ನಡೆಸುತ್ತಿರುವ ಸಂಪಾದನೆಯ ವ್ಯವಸಾಯಕ್ಕೆ ಅಲ್ಲಿಯ ಒಬ್ಬ ಪ್ರಸಿದ್ಧ ಲೇಖಕರಾದ ಏ. ಎಲ್. ಔರಬ್ಯಾಕರು ಕೆಲವು ನಿದರ್ಶನಗಳನ್ನು ಕೊಡುತ್ತಾರೆ. ಅದರಲ್ಲಿ ಕೆಳಗಿನದು ಒಂದು.

'ನನಗೆ ೫೦ ಡಾಲರು ಬೇಕು; ಕೊಡದಿದ್ದರೆ ಅತ್ಯಾಚಾರ ಮಾಡಬಂದೆಯೆಂದು ಕೂಗಿ ಬಟ್ಟೆ ಬರೆ ಹರಿದು ಚೆಲ್ಲಿ ನಿಂತು ಬಿಡುತ್ತೇನೆ' ಎಂದು ಒಬ್ಬಳು ಒಬ್ಬ ಹಾದಿಹೋಕನನ್ನು ಹಿಡಿದು ನಿಲ್ಲಿಸಿ ಕೇಳಿದಳಂತೆ. ಅವನು ಮಾತಾಡದೆ ನಿಲ್ಲಲು, ಅವಳು ಹೇಳಿದಂತೆ ಮಾಡಿ ಪೋಲೀಸರ ಲಕ್ಷ್ಯ ಸೆಳೆದಳು. ಅವರು ಕೋರ್ಟಿಗೊಯ್ದು ಹೆಂಗಸಿನ ಮಾತಿಗೆ ಬೆಲೆಯಿದೆ ಎಂಬ ನಂಬಿಕೆಯಿಂದ ಗಂಡಸಿನ ಮೇಲೆ ಸಾಕ್ಷಿಯಿಲ್ಲದೆ ಆರೋಪ ಹೊರಿಸಿ ನ್ಯಾಯಾಧೀಶರಿಂದ ಅವನಿಗೆ ೧೦ ವರ್ಷದ ಶಿಕ್ಷೆ ವಿಧಿಸಿದಳು. ಆದರೆ ಅವನ ಪುಣ್ಯವಶದಿಂದ ಮೇಲಿನ ಕೋರ್ಟಿನಲ್ಲಿ ಅವನು ಸೇದುತ್ತ ನಿಂತಿದ್ದ ಸಿಗರೇಟಿನ ಬೂದಿ ಅರ್ಧ ಇಂಚಿನಷ್ಟಿತ್ತೆಂದು ಕಂಡವರ ಸಾಕ್ಷಿಯಿಂದ ತಿಳಿದು, ಅವನು ಸುಮ್ಮನಿದ್ದನಲ್ಲದೆ ಯಾವ ಅಪರಾಧವನ್ನೂ ಮಾಡಿಲ್ಲ ಎಂದು ತೀರ್ಮಾನವಾಯಿತು. ಹೀಗೆ ನಾನಾ ವಿಧದಿಂದ ಹೆಂಗಸಿಗೆ ಲೈಂಗಿಕ ವ್ಯವಹಾರದಲ್ಲಿ ವಿಶೇಷ ಸವಲತ್ತನ್ನು ಕೊಡುವ, ಅವಳಲ್ಲೇ ಹೆಚ್ಚು ವಿಶ್ವಾಸವಿಡುವ ಕಾಯಿದೆಗಳನ್ನು ಅವಳೀಗ ದುರುಪಯೋಗಪಡಿಸಿಕೊಳ್ಳಹತ್ತಿ ಅನೇಕ ಪ್ರಾಮಾಣಿಕ ಅಮೇರಿಕನ್ನರಿಗೆ ಪೇಚು ಬಂದೊದಗಿದೆಯೆಂದು ಉಕ್ತ ಲೇಖಕರು ಬರೆಯುತ್ತಾರೆ.

ಕೆಲವು ಹುಡಗಿಯರಂತೂ ತಾವೆಲ್ಲಾದರೂ ಕಾಲು ಜಾರಿ ಬಿದ್ದರೂ ಸಾರ್ವಜನಿಕರ ಕರುಣೆಗೆ ಪಾತ್ರರಾಗಬೇಕೆಂಬ ಹಂಬಲಿನಿಂದ ಕಲ್ಪಿತ ಪುರುಷನನ್ನೂ ಅವನು ಮಾಡ ಬಂದ ಅತ್ಯಾಚಾರವನ್ನೂ ಬಣ್ಣಿಸಿ ಅಧಿಕಾರಿಗಳನ್ನು ದುರವಸ್ಥೆಗೆ ಗುರಿಪಡಿಸಿದ್ದುಂಟು. ಮತ್ತೆ ಕೆಲವರು ತಾವು ಕೇಳಿದ್ದಕ್ಕೆ ಒಪ್ಪದವನನ್ನು ವೈರಿ ಎಂದು ತಿಳಿದು ಅವನ ಮೇಲೆ ಸೇಡು ತೀರಿಸಿಕೊಳ್ಳಲಿಕ್ಕೆಂದು ಅತ್ಯಾಚಾರದ ಆರೋಪ ಹೊರಿಸಿ ತಮ್ಮ ಪ್ರತಾಪವನ್ನು ಪ್ರದರ್ಶಿಸುತ್ತಾರೆ. ಇನ್ನು ಸಂಪಾದನೆಗಂತೂ ಮೇಲಿನ ಉದಾಹರಣೆಯೇ ಇದೆ. ಅ ತ್ಯಾ ಚಾ ರ ವಿ ರ ಲಿ ಅ ನು ಕೂ ಲಾ ಚಾ ರ ವಿ ರ ಲಿ ಈ ಎರಡು ಮುಖಗಳಲ್ಲೂ ಲೈಂಗಿಕ ವ್ಯವಹಾರದಲ್ಲಿ ವಾಸ್ತವಿಕ ಕರ್ತೃತ್ವವು ದೇಹರಚನಾಬಲದಿಂದ ಗಂಡಸಿಗೇ ಬರುವುದು ಅರ್ಧಸ್ವಾಭಾವಿಕವಾದರೆ ಅರ್ಧ ಹೆಂಗಸಿನ ದುರ್ಬೋಧತೆ ಇಲ್ಲವೆ ಅಬೋಧತೆಯಿಂದ ಎಂಬುದು ಶಾಸ್ತ್ರಜ್ಞರ ಮತ. ಇದನ್ನರಿತು ಇಂಥ ದುರಾಚಾರ ಹೆಚ್ಚಿದ ದೇಶಗಳು ತಕ್ಕ ಕ್ರಮಗಳನ್ನು ತೆಗೆದುಕೊಂಡು, ಕಾಯದೆ, ಶಿಕ್ಷೆ, ಶಿಕ್ಷಣ ಮಾರ್ಗಗಳನ್ನು ಅನುಕೂಲ ಪರಿಣಾಮವುಂಟಾಗುವಂತೆ ಮಾರ್ಪಡಿಸತಕ್ಕದ್ದು ಅನಿವಾರ್ಯ.

## ಸೌಂದರ್ಯಜಾಲ

ಸಂ. ಪ್ರಾಂತದ ಭಾಟಾಪಳ್ಳಿಯಲ್ಲಿ ಸುಂದರಿ ಎಂಬ ಹುಡುಗಿಯೊಬ್ಬಳಿದ್ದಾಳೆ. ಅವಳು ದೇಹಲಾವಣ್ಯದ ಮದದಿಂದ ಫ್ರೆಂಚ ಕಾದಂಬರಿಕಾರನಾದ ಬಲ್ಝಾಕನ ಫೆಡೋರಾ ಎಂಬ ನಾಯಿಕೆಯಂತೆ ಕಂಡವರೆಲ್ಲರ ಮೇಲೆ ತನ್ನ ಪ್ರೇಮಜಾಲವನ್ನು ಬೀಸಿ ವಂಚಿಸತೊಡಗಿದಳು. 'ಇದರಿಂದ ಊರಲ್ಲೆಲ್ಲ ಸುಂದೋಪಸುಂದರ ಕಲಹ ಪ್ರಾರಂಭವಾಯಿತು.

ಮೊದಲೇನೋ ಅವಳು ಮುಗ್ಧೆಯಾಗಿದ್ದಳು. ಕಡೆಗೆ ಮೇಲೆ ಹೇಳಿದಂತೆ ವರ್ತಿಸತೊಡಗಿ ಸುಂದರಲಾಲನೆಂಬವನನ್ನು ಮೊದಲು ಮರುಳು ಮಾಡಿದಳು. ಅವನ ಕಡೆಯವರ ಮೇಲೆ ಉಳಿದವರು ಬಡಿದಾಡಬರಲು ಸುಂದರಿ ಮತ್ತೊಬ್ಬನೊಡನೆ ಓಡಿ ಹೋಗಿ ಉಳಿದವರಿಗೆ ತನ್ನನ್ನು ಬೇಕಾದರೆ ಗೆದ್ದುಕೊಂಡು ಹೋಗಿರಿ ಎಂದಳಂತೆ! ಈ ಸದಾರಮೆಯ, ಥಾಮಸ್ ಹಾರ್ಡಿ ನಿರ್ಮಿಸಿದ ವೈಲ್ಡಿವ್ ಎಂಬ Lady killer– ಹೆಣ್ಣನ್ನು ಮರುಳುಮಾಡುವ ಗಂಡಿನ (ವಿರುದ್ಧ) ತಂತ್ರವನ್ನು ಆಚರಿಸುವ, ದ್ವಾಪರದ ಕೃಷ್ಣನ ಹೆಣ್ಣು ಅವತಾರದಂತಿರುವ ಈ ಗಂಡನ್ನು ಮರುಳು ಮಾಡುವ ಹುಡುಗಿಯ ಪ್ರೇಮಕಲಹ ಹೆಚ್ಚಾಗಿ ಪೋಲೀಸರು ಒಮ್ಮೆ ದಂಗೆ ನಿಲ್ಲಿಸಬೇಕಾಗಿ ಬಂತಂತೆ! ಆಕೆ ಮತ್ತೆ ಸ್ವಗ್ರಾಮಕ್ಕೆ ಬಂದಿರುವಳೆಂದು ಸುದ್ದಿ. ಅವಳ ದೆಸೆಯಿಂದ ಹುಡುಗರಿಗೆ ಎದೆಬೇನೆ, ಮುದುಕರಿಗೆ ತಲೆಬೇನೆ!

# ವ್ಯಾಪಾರ ಪ್ರಪಂಚ

## ಮುಂಬಯಿ ಶೇರ ಪೇಟೆ

ತಾ. ೧೭

ಹೈದರಾಬಾದ ಪರಿಸ್ಥಿತಿಯ ಅನಿಶ್ಚಿತತೆಯಿಂದ ಮುಂಬಯಿ ಶೇರ ಪೇಟೆಯಲ್ಲಿ ತೇಜಿ ವ್ಯಾಪಾರಿಗಳ ಧೈರ್ಯ ಬಹಳ ಕುಂದಿತು. ಸಾಲದ್ದಕ್ಕೆ ಟಾಟಾ ಉಕ್ಕಿನ ಕಾರಖಾನೆಯ ಲಾಭ ಹಂಚಿಕೆ ರೂ. ೫೦ ಕ್ಕೆ ಮೀರಲಿಕ್ಕಿಲ್ಲೆಂಬ ಸಂದೇಹವೂ ಪೇಟೆಯ ದೌರ್ಬಲ್ಯಕ್ಕೆ ಕಾರಣವಾಯಿತು. ಇಂದಿನ ಕೊನೆಯ ದರಗಳು ಇಂತಿದ್ದವು.

### ಜವಳಿ

| | |
|---|---|
| ಅಹಮದಾಬಾದ ಅಡ್ವಾನ್ಸ | ೨೭೫-೦-೦ |
| ಬಾಂಬೆ ಡಾಯಿಂಗ್ | ೧೯೫೫-೦-೦ |
| ಸೆಂಟ್ರಲ ಇಂಡಿಯಾ | ೩೦೮-೦-೦ |
| ಸೆಂಚುರಿ | ೫೧೧-೪-೦ |
| ಗೋಕಾಕ | ೩೧೬-೦-೦ |
| ಕೋಹಿನುರು | ೬೨೭-೦-೦ |
| ಫಿನಿಕ್ಸ | ೪೬೬-೪-೦ |
| ಸ್ವದೇಶಿ | ೬೧೩-೦-೦ |

### ಇತರ

| | |
|---|---|
| ಬೇಲಾಪುರ ಸಕ್ಕರೆ | ೨೮೬-೦-೦ |
| ಬಾಂಬೇ ಬರ್ಮಾ | ೪೩೧-೪-೦ |
| ಟಾಟಾ ಸ್ಟೀಲ ಡೆಫರ್ಡ | ೧೫೯೫-೦-೦ |
| ಸಿಂಧ್ಯಾ ಸ್ಟೀಮ | ೨೭-೧೨-೦ |
| ಅಸೊ. ಸಿಮೆಂಟ್ಸ | ೧೭೦-೦-೦ |
| ಸೆಂಟ್ರಲ ಬ್ಯಾಂಕ್ | ೮೬-೧೨-೦ |
| ಇಂಪೀರಿಯಲ್ ಬ್ಯಾಂಕ ಪೂರ್ಣ | ೨೦೪೦-೦-೦ |
| ಇಂಡಿಯನ್ ಬ್ಯಾಂಕ | ೨೦೮-೦-೦ |
| ರಿಝರ್ವ ,, | ೧೧೦-೦-೦ |

### ಚಿನ್ನ--ಬೆಳ್ಳಿ

ಹೈದರಾಬಾದ ಪರಿಸ್ಥಿತಿಯಿಂದ ಚಿನ್ನ ಬೆಳ್ಳಿಗಳ ಬೆಲೆ ಏರಬೇಕಾಗಿದ್ದರೂ ತೇಜಿಗಳು ಏನೂ ಎದೆಗಾರಿಕೆ ತೋರಲಿಲ್ಲಿ. ಬದಲಿಗೆ ಕೆಲ ದಿನ ಬೆಲೆಗಳು ಇಳಿಮುಖವಾಗಿದ್ದವು ತಯಾರಿ ಚಿನ್ನ ರೂ. ೧೧೩-೮-೦ ವರೆಗೂ ಇಳಿದು ಹೋಗಿತ್ತು. ಇಂದಿನ ಬೆಲೆಗಳು ಇಂತಿವೆ.

| | |
|---|---|
| ಚಿನ್ನ ತಯಾರಿ | ೧೧೫-೨-೦ |
| ,, ವಾಯದಾ | ೧೧೪-೧೧-೦ |
| ಸಾವರಿನ್ | ೭೫-೮-೦ |
| ಬೆಳ್ಳಿ ತಯಾರಿ | ೧೭೬-೮-೦ |
| ,, ವಾಯದಾ | ೧೭೬-೦-೦ |
| ,, ಡಿಸೆಂಬರ | ೧೭೫-೪-೦ |

### ಅರಳೆ

ಅರಳೆ ಪೇಟೆಯಲ್ಲಿ ಈ ವಾರದಲ್ಲಿ ತೀರ ದೌರ್ಬಲ್ಯಸ್ಥಿತಿ ಉಂಟಾಯಿತು. ಬೆಲೆಗಳು ಬಹಳ ಇಳಿದು ಹೋದವು. ಜುಲೈ ವಾಯಿದೆ ರೂ. ೬೩೮ ರ ತನಕವೂ ಇಳಿದು ಹೋಗಿತ್ತು. ಇಂದಿನ ಬೆಲೆಗಳು ಹೀಗಿದ್ದವು.

| | |
|---|---|
| ಜುಲೈ | ೬೪೩-೦-೦ |
| ಸೆಪ್ಟೆಂಬರ | ೬೪೨-೦-೦ |

### ಎಣ್ಣೆಕಾಳು

| | |
|---|---|
| ಶೇಂಗಾ | ೧೮೬-೬-೦ |
| ,, (ಹೊಸ) | ೧೮೦-೦-೦ |
| ಅಗಸಿ | ೨೮-೮-೦ |
| ,, ಎಣ್ಣೆ | ೧೬-೧೨-೦ |

### ಶಿವಮೊಗ್ಗೆ ಅಡಿಕೆ

ತಾ. ೨೩

| | |
|---|---|
| ದೇಶಾವರ ನಂ. ೧ ಮಣ ೧ ಕ್ಕೆ | ೩೪-೩೫ |
| ,, ,, ೨ | ೩೦-೩೩ |
| ಕೊಪ್ಪ ಶೃಂಗೇರಿ | ೨೯-೩೩ |
| ಬೀರೂರು ತುಡುಕಿ | ೩೧-೩೩ |
| ತೊರೆಸಾಲು ,, | ೨೬-೩೦ |
| ದೇಶಾವರ ಬೆಟ್ಟೆ | ೧೮-೨೦ |
| ಮೆಣಸಿನ ಕಾಳು | ೩೭-೩೮ |

ತೀರ್ಥಹಳ್ಳಿ ಹೊಸ ನಗರಗಳ ಅಡಿಕೆ ತೋಟಗಳಲ್ಲಿ ಕೊಳೆರೋಗ ಪ್ರಾರಂಭವಾಗಿದ್ದು ಕೊಳೆ ವಿನಾಶಕ ಔಷಧವನ್ನು ಪೂರೈಸಲು ಅಡಕೆ ತೋಟದವರು ಸರಕಾರಕ್ಕೆ ಅರ್ಜಿ ಮಾಡಿದ್ದಾರೆ.

### ಸಾಂಗಲಿ

| | |
|---|---|
| ಅರಸಿನ (ಹೊಸ) ಹೇರು | ೧೧೫-೧೨೦ |
| ಶೇಗಾ ಖಂಡಿ | ೧೯೪-೦-೦ |
| ಮೆಣಸಿನಕಾಯಿ ಹೇರು | ೧೮೦-೨೦೦ |
| ಬೆಲ್ಲ | ೩೦-೫೭ |

### ಹುಬ್ಬಳ್ಳಿ

| | | |
|---|---|---|
| ಜಯವಂತ ಹತ್ತಿ | ೧ | ೪೮೦-೪೫೦ |
| ,, | ೨ | ೪೦೦-೪೨೦ |
| ,, | ೩ | ೩೫೦ ೩೮೦ |
| ಅಪಲಂಡ ಹತ್ತಿ | ೧ | ೪೨೦-೪೩೦ |
| ,, | ೨ | ೪೨೦-೩೩೫ |
| ಜಿನ | | ೩೦೫-೩೨೫ |
| ಅ. ಡಬಲರೋಲ | | ೨೯೫-೩೦೫ |
| ಸಾಃಜಿನ | | ೨೮೦-೨೯೦ |
| ಜ. ಹತ್ತಿಕಾಳು | | ೮॥ ಪೌಂ. |
| ಅ. ಹತ್ತೀಕಾಳು | | ೮॥ ॥ |

# ನಾಲ್ಕು ಮಾತು — ರಂಗನಾಥ ದಿವಾಕರ

## ೧. ಹೈದ್ರಾಬಾದ ಸಮಸ್ಯೆ

ನಿಜಾಮರು ತಾವಾಗಿ ಪೋಷಿಸಿ ಪ್ರೋತ್ಸಾಹಿಸಿದ ರಜಾಕಾರರ ವರ್ಚಸ್ಸಿಗೆ ಬಲಿಯಾಗಿ ಹಿಂದೀ ಒಕ್ಕೂಟದವರ ಸ್ನೇಹದ ಕೈಯನ್ನು ನಿರಾಕರಿಸಿದರು. ಹೈದ್ರಾಬಾದ ಸಮಸ್ಯೆಗೆ ಈ ಮೂಲಕ ಒಂದು ಹೊಸ ಸ್ವರೂಪವು ಪ್ರಾಪ್ತವಾಯಿತು. ಒಕ್ಕೂಟ ಸರಕಾರದವರು ಗಡಿಯ ಮೇಲೆ ಪೋಲೀಸ ಹಾಗೂ ಸೈನ್ಯವನ್ನು ಒಯ್ದುಬಿಟ್ಟಿದ್ದರೂ ಅದು ಗಡಿ ಸಂರಕ್ಷಣೆಗಾಗಿ ಹೊರತು ದಾಳಿಗಾಗಿ ಅಲ್ಲ ಎಂಬುದು ಸ್ಪಷ್ಟವಿದೆ. ಹೈದ್ರಾಬಾದಿನ ಮೇಲೆ ಯುದ್ಧವನ್ನು ಹೂಡಿ ದಾಳಿಯನ್ನು ಮಾಡಬೇಕಾದರೆ ಅದಕ್ಕೆ ಸಾಕಷ್ಟು ಕಾರಣಗಳು ಅಂತರ್‌ರಾಷ್ಟ್ರೀಯ ಕಾಯದೆಗಳ ಪ್ರಕಾರ ಬೇಕಾಗುತ್ತವೆ. ಮೇಲಾಗಿ ಯಥಾಸ್ಥಿತಿ ಒಪ್ಪಂದವೂ ಇನ್ನೂ ಮುರಿದು ಹೋಗಿದ್ದು ಜಾಹೀರ ಆಗಿಲ್ಲ. ಇಂಥ ಒಂದು ವಿಲಕ್ಷಣ ಪರಿಸ್ಥಿತಿಯಲ್ಲಿ ಈ ಹೈದ್ರಾಬಾದ ಸಮಸ್ಯೆ ನಿಂತಿದೆ.

× × ×

ಹೈದ್ರಾಬಾದ ಇದು ಸುತ್ತಲೂ ಒಕ್ಕೂಟ ಪ್ರದೇಶದಿಂದ ಸುತ್ತುಗಟ್ಟಲ್ಪಟ್ಟಿದ್ದು ಈ ಗಡಿಯ ಉದ್ದಳತೆ ಸುಮಾರು ೨೫೦೦ ಮೈಲು ಇರುವದು. ರಜಾಕಾರರು, ಪಠಾಣರು, ಅರಬರು ಹಾಗೂ ಲೂಟಿಗಾರರು ಈ ಗಡಿಯ ಹಲಕೆಲವು ಭಾಗಗಳಲ್ಲಿ ಒಳನುಗ್ಗಿ ಅತ್ಯಾಚಾರಗಳನ್ನು ಮಾಡಿ ಪುನಃ ಹೈದ್ರಾಬಾದ ಗಡಿ ಸೇರಿದ ಅನೇಕ ಉದಾಹರಣೆಗಳು ಈಗ ಪ್ರಸಿದ್ಧವಾಗಿವೆ ಹಾಗೂ ಪ್ರಸಿದ್ಧವಾಗುತಿವೆ. ಇಂಥ ದಾಳಿಗಳಾಗದಂತೆ, ಆದರೆ ಮೂರು ಮೈಲುಗಳವರೆಗೆ ಗಡಿಗಳಲ್ಲಿ ಒಳಹೊಕ್ಕಾದರೂ ಅವರ ಶಾಸನ ಮಾಡುವಂತೆ ಎಚ್ಚರಪಡುವದು ನಮ್ಮ ಸೈನ್ಯ ಹಾಗೂ ಪೋಲೀಸ ಪಡೆಯ ಕರ್ತವ್ಯವಿದೆ. ಅದನ್ನು ಅವರು ಚನ್ನಾಗಿ ಮಾಡಬಲ್ಲರೆಂಬ ಭರವಸೆ ನನಗಿದೆ.

× × ×

ಆದರೆ ಇದಕ್ಕೂ ಹೆಚ್ಚಿನ ಪ್ರಶ್ನೆ ಇನ್ನೊಂದಿದೆ. ಹೈದ್ರಾಬಾದಸೀಮೆಯಲ್ಲಿ ನಡೆದ ರಜಾಕಾರರಅತ್ಯಾಚಾರಗಳಿಗೆಮದ್ದೇನು? ಅದೇ ರೀತಿ ಪೂರ್ಣ ಜವಾಬದಾರಿ ರಾಜ್ಯ ಪದ್ಧತಿಯನ್ನು ತಮ್ಮಲ್ಲಿ ಸ್ಥಾಪನ ಮಾಡಲು ಹೈದ್ರಾಬಾದದ ಪ್ರಜೆಗಳು ಏನು ಮಾಡಬೇಕು ? ಈ ಎರಡೂ ಪ್ರಶ್ನೆಗಳನ್ನು ಹೈದ್ರಾಬಾದ ಪ್ರಜೆಗಳೇ ಬಿಡಿಸಲು ಸಿದ್ಧರಾಗಿ ಅದರಂತೆ ಸಂಘಟನೆ ಮಾಡಿ ಸ್ವಾರ್ಥತ್ಯಾಗಪೂರ್ವಕವಾಗಿ ಹೋರಾಡಲು ಸಿದ್ಧರಾಗಲಿಕ್ಕೆಬೇಕು. ಈಗ ಅನೇಕರು ಅತ್ಯಾಚಾರಗಳಿಗೆ ಅಂಜಿ ಹೈದ್ರಾಬಾದ ಬಿಟ್ಟು ಇತ್ತ ಓಡಿ ಬರಲಾರಂಭಿಸಿರುವರು. ಈ ರೀತಿ ಓಡಿ ಬರುವದರಿಂದ ಹೊಸ ಸಮಸ್ಯೆಗಳು ನಿರ್ಮಾಣವಾಗುವವೆ ಹೊರತು ಹಳೇ ಪ್ರಶ್ನೆ ಬಿಡುವದಿಲ್ಲ ! ತಮ್ಮ ಆಸ್ತಿ, ತಮ್ಮ ಮಕ್ಕಳುಮರಿಗಳು ತಮ್ಮ ಮಾನಾಭಿಮಾನ, ತಮ್ಮ ಜೀವ ಇವುಗಳ ರಕ್ಷಣವನ್ನು ಇದ್ದಲ್ಲಿಯೆ ಇದ್ದು ಮಾಡುವ ನಿರ್ಧಾರವನ್ನು ಎಲ್ಲರೂ ಮಾಡುವದು ಅವಶ್ಯ. ಹೀಗೆ ರಕ್ಷಣಮಾಡುವಾಗ ಅಸುದೊರೆದರೂ ಚಿಂತೆಯಿಲ್ಲ ಎಂಬ ಕ್ಷಾತ್ರವೃತ್ತಿಯಿಂದ ಪ್ರೇರಿತರಾದರೆ ಮಾತ್ರ ಈಗಿನ ಸಮಸ್ಯೆ ಬಿಡಿಸುವದು ಸಾಧ್ಯವು. 'ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್' ಎಂಬ ಶ್ರೀಕೃಷ್ಣನ ಉಪದೇಶವೆ ಇಲ್ಲಿ ಯೋಗ್ಯವಾದುದು. ನೂರರಲ್ಲಿ ಎಂಬತ್ತೆಂಟರಷ್ಟು ಇರುವ ಹಿಂದೂ ಪ್ರಜೆಗಳು ತಮ್ಮ ಮೇಲೆ ಜುಲುಮೆಯಾಗುತ್ತದೆಂದು ಓಡಿ ಹೋಗಲಾರಂಭಿಸಿದರೆ ಅವರ ರಕ್ಷಣೆ ಮಾಡುವವರಾರು? ಇತ್ತ ಕಡೆಯ ಜನರಾಗಲಿ, ಒಕ್ಕೂಟ ಸರಕಾರವಾಗಲಿ ಸಂತ್ರಸ್ತರಿಗೆ ಸಹಾಯ ಮಾಡುವದಾದರೂ ಹೈದ್ರಾಬಾದದ ಜನರು ನಿಂತಲ್ಲಿ ನಿಂತು ಸ್ವಸಂರಕ್ಷಣೆಗಾಗಿ ನಿಃಶಸ್ತ್ರ, ಇಲ್ಲವೆ ಸಶಸ್ತ್ರ ರೀತಿಯಿಂದ ಹೋರಾಡಲು ಸಿದ್ಧರಾದರೆ ಮಾತ್ರ ಸಾಧ್ಯ. ಇಲ್ಲದಿದ್ದರೆ ಅಸಾಧ್ಯ. ಇದು ಕಾಣಲಿಕ್ಕೆ ಎಷ್ಟೇ ಕಠೋರವಾದ ಉಪದೇಶವೆಂದು ಕಂಡರೂ ಇದೊಂದೇ ಉಪಾಯವೆಂದು ನಾನು ಭಾವಿಸಿದ್ದೇನೆ.

× × ×

ಹೊಣೆಗಾರ ರಾಜ್ಯಪದ್ಧತಿಯ ಸ್ಥಾಪನೆಗಾಗಿ ಕೂಡ ಹೈದರಾಬಾದಿಗಳು ಅತ್ಯಂತ ಸಂಘಟಿತರಾಗಿ ಹಿಂದುಸ್ತಾನದ ಜನರು ಯಾವ ನಿಃಶಸ್ತ್ರ ಪ್ರತಿಕಾರದಿಂದ, ಅಸಹಕಾರದಿಂದ ತಮ್ಮ ಹಕ್ಕುಬಾಧ್ಯತೆಗಳನ್ನು ಪಡೆದರೊ ಅದೇ ರೀತಿ ಹೋರಾಡಬೇಕಾಗುವದು. ಅದಕ್ಕೆ ಅನ್ಯ ಉಪಾಯವಿಲ್ಲ. ಒಕ್ಕೂಟದ ಜನರಿಂದ ತಮ್ಮ ಉದ್ಧಾರವಾಗುವದೆಂಬ ಪರಾವಲಂಬಿ ಭಾವವು ಹೈದ್ರಾಬಾದಿಗಳಲ್ಲಿ ಇರದಿರುವದೆ ಉತ್ತಮ. ಇದು ತಮ್ಮ ಪ್ರಶ್ನೆ, ತಾವೇ ಸ್ವಪರಾಕ್ರಮದಿಂದ ಬಿಡಿಸತಕ್ಕದ್ದಿದೆ ಎಂದು ನಿರ್ಧಾರ ಮಾಡಿಯೇ ಈ ಹೋರಾಟ ನಡೆಸಲಿಕ್ಕೆ ಬೇಕು. ಅನ್ಯ ಉಪಾಯವು ತೋರುವದಿಲ್ಲ.

## ೨ ಕುಂದಗೋಳದ ಕಾರುಹುಣ್ಣಿವೆ

ಆಕಸ್ಮಾತ್ತಾಗಿ ಮೊನ್ನಿನ ಕಾರುಹುಣ್ಣಿವೆಯ ದಿನ ನಾನು ಕುಂದಗೋಳಕ್ಕೆ ಹೋಗಿದ್ದೆ. ಪ್ರಿನ್ಸಿಪಾಲ ಜಠಾರ ಹಾಗೂ ಶ್ರೀ ಹುಕ್ಕೇರಿಕರರೊಡನೆ ಹೋಗಿದ್ದೆ. ಅಲ್ಲಿ ಸಂಭ್ರಮದಿಂದ ಕಾರುಹುಣ್ಣಿವೆಯ ಜಾತ್ರೆ ನಡೆದಿತ್ತು. ಆದರೆ ಅಲ್ಲಿ ಒಂದು ವಿಶಿಷ್ಟ ವಿಲಕ್ಷಣ ಸಮಾರಂಭವು ದೃಷ್ಟಿಗೆ ಬಿತ್ತು. ಅದು ಅಲ್ಲಿಯ ಬ್ರಹ್ಮದೇವರ ಗುಡಿಗೆ ಸಂಬಂಧಿಸಿದ್ದು. ಎರಡು ಶೃಂಗರಿಸಿದ ಬಂಡಿಗಳಲ್ಲಿ ಪ್ರತಿಯೊಂದರಲ್ಲಿ ಎಂಟೆಂಟರಂತೆ 'ವೀರಗಾರರು' ಬಿಚ್ಚಿದ ಖಡ್ಗವನ್ನು ಹಿಡಿದು, ತಲೆಯ ಮೇಲೆ ಮುಂಡಾಸ, ಮೈಮೇಲೆ ರೇಶಮೀ ವಸ್ತ್ರ ಹೀಗೆ ವೀರಾವೇಶದಿಂದ ನಿಂತಿದ್ದುದು ಕಂಡುಬಂದಿತು. ಬ್ರಹ್ಮದೇವರಿಗೆ ಪ್ರದಕ್ಷಿಣೆ ಹಾಕಿ ಆ ಬಂಡಿಗಳು ಊರತುಂಬ ಮೆರವಣಿಗೆ ಮಾಡುವದರಲ್ಲಿದ್ದವು. ಆ ಬ್ರಹ್ಮದೇವರ ಪೂಜಾರಿಗಳು ಪ್ರತಿವರುಷ ಆ 'ವೀರಗಾರರನ್ನು' ಸ್ವೇಚ್ಛೆಯಿಂದ ಆರಿಸುವರಂತೆ. ಅವರು ಇಡೀ ದಿನ ಉಪವಾಸವಿದ್ದು ಈ ಮೆರವಣಿಗೆ ಮುಗಿದಾದವು ಆದ ಬಳಿಕ ಭಕ್ತರಲ್ಲಿ ಪೂಜೆ ಹೊಂದಿ ಮರುದಿನ ಊಟ ಮಾಡುವರು. ಆ ಬಳಿಕ ವಿಸರ್ಜನೆ.

× × ×

ಅಲ್ಲಿಯ ಜನರಿಗೆ ಇದರ ಅರ್ಥವನ್ನು ಕೇಳಿದೆನು. ಯಾರಿಗೂ ಗೊತ್ತಿರಲಿಲ್ಲ. ಆದರೆ ಅಲ್ಲಿಯ ಜನರಲ್ಲಿ ಈ ಸಮಾರಂಭದ ಬಗ್ಗೆ ಅತ್ಯಂತ ಉತ್ಸಾಹ, ಆಸ್ಥೆ ಕಂಡುಬಂದಿತು. ನಾವು ಸುಶಿಕ್ಷಿತರೆನಿಸಿಕೊಳ್ಳುವವರು, ವಿಶೇಷತಃ ಇಂಗ್ಲೀಷ ಕಲಿತವರು, ಇಂಥ ವಿಷಯಗಳತ್ತ ದುರ್ಲಕ್ಷ ಮಾಡುತ್ತೇವೆ. ಆದರೆ ನಿಜವಾಗಿ ಜನಸಾಮಾನ್ಯರಿಗೆ ಇಂಥ ಮಾತುಗಳಲ್ಲಿ ಅತ್ಯಂತ ಆಸ್ಥೆ ಆಸಕ್ತಿಗಳು ಕಂಡುಬರುವವು. ಆದುದರಿಂದ ಇಂಥ ಸಂಗತಿಗಳ ಅಭ್ಯಾಸ ಹಾಗೂ ಸಾರ್ವಜನಿಕ ಕಾರ್ಯಕ್ಕಾಗಿ, ಸೇವೆಗಾಗಿ ಅವುಗಳ ಉಪಯೋಗ ಇವು ಆಗುವದು ಅವಶ್ಯ.

× × ×

ಆದರೆ ಅವುಗಳ ಅರ್ಥ, ಇತಿಹಾಸ, ಇವೇ ನಮಗೆ ಗೊತ್ತಿಲ್ಲದಿದ್ದರೆ ಅವುಗಳ ಉಪಯೋಗ ಮಾಡಿಕೊಳ್ಳುವ ಬಗೆ ಯಾವುದು? ವೀರಗಲ್ಲುಗಳು ಅಲ್ಲಲ್ಲಿ ಯಾವ ಕಾರಣಗಳಿಂದ ಇವೆಯೊ ಅದೇ ಕಾರಣದಿಂದ ಈ 'ವೀರಗಾರರ' ಮೆರವಣಿಗೆ ಆಗುತಿರಲಿಕ್ಕೆಬೇಕೆಂದು ನನ್ನ ಊಹೆ. ಯಾವದೊಂದು ಕಠಿಣ ಪ್ರಸಂಗದಲ್ಲಿ ಹಲವು ವೀರರು ಊರಿನ ಸಂರಕ್ಷಣೆಮಾಡಿ ದಾಳಿಗಾರರನ್ನು ಓಡಿಸಿ ವಿಜಯಿಗಳಾಗಿ ತಿರುಗಿ ಬಂದಾಗ ಅವರ ಮೆರವಣಿಗೆ ನಡೆದಿರಬೇಕು. ಅದರ ಸ್ಮರಣಾರ್ಥವಾಗಿಯೆ ಇದು ಇರಬಹುದು. ಆದರೆ ಇಂಥ ಸಂಗತಿಗಳ ಸಂಶೋಧನವು ಅವಶ್ಯ. ಅದರಿಂದ ಜನಸಾಮಾನ್ಯರ ಮನೋರಂಜನೆ, ಅವರಿಗೆ ಉತ್ಸಾಹಕೊಡುವ ಮಾತುಗಳ ಜ್ಞಾನ ಇವು ಆಗಬಲ್ಲವು.

## ೩ ನೋಕರಿಗಳು

ಸರಕಾರಿ ನೋಕರಿಗಳೆಂದರೆ ಹೇಯ, ಯಾಕೆಂದರೆ ಪರಕೀಯ ಸರಕಾರ, ನಮ್ಮನ್ನು ದಾಸ್ಯದಲ್ಲಿಟ್ಟ ಸರಕಾರ ಎಂಬ ಭಾವನೆ ನಮ್ಮೆಲ್ಲರಲ್ಲಿತ್ತು. ಆದರೆ ಈಗ ಆ ಭಾವನೆ ಹೋಗಿದೆ. ಎಲ್ಲರೂ ಸರಕಾರೀ ನೋಕರಿಯತ್ತ ಓಡುತಲಿದ್ದಾರೆ. ಇದು ಎಷ್ಟರ ಮಟ್ಟಿಗೆ ಹಿತಕರ ಎಂಬದನ್ನು ಹೇಳಲಾರೆ. ಸರಕಾರಕ್ಕೂ ತಮ್ಮ ಕೆಲಸವನ್ನು ಯೋಗ್ಯರೀತಿಯಿಂದ ನಡೆಸಲು ಯೋಗ್ಯತೆಯುಳ್ಳ ಜನರು ಅವಶ್ಯ ಎಂಬದು ಒಪ್ಪಿವಾದವು. ಆದರೆ ಅದೇ ಕಾಲಕ್ಕೆ ಮಾಡಿದರೆ ನೋಕರೀ ಮಾಡಬೇಕು ಇಲ್ಲದಿದ್ದರೆ ಉಪವಾಸ ಸಾಯಬೇಕು, ಈ ಸ್ಥಿತಿಯು ಎಂದೂ ಹಿತಕರವಾಗಲಾರದು. ಯಾವದೇ ಕಾಲಕ್ಕೆ ಯಾವದೇ ಸರಕಾರದಲ್ಲಿ (ಸೋವ್ಹಿಯೆಟ ಸರಕಾರಕ್ಕೆ ಇದು ಅನ್ವಯಿಸುವದಿಲ್ಲ) ಜನಸಂಖ್ಯೆಯ ನೂರರಲ್ಲಿ ಎರಡಕ್ಕಿಂತ ಹೆಚ್ಚು ಜನರು ಸರಕಾರೀ ನೋಕರಿಯಲ್ಲಿರುವದಿಲ್ಲ. ನೂರರಲ್ಲಿ ತೊಂಬತ್ತೆಂಟು ಜನರು ಸರಕಾರೇತರ ಸ್ವತಂತ್ರ ಉದ್ಯೋಗಗಳನ್ನು ಮಾಡಿ ಹೊಟ್ಟೇ ಹೊರಕೊಳ್ಳುವರು. ಆದುದರಿಂದ ಸ್ವತಂತ್ರ ಉದ್ಯೋಗಗಳಿಗೆ ಯಾವಾಗಲೂ ಮಹತ್ವವು ಇದ್ದೇ ಇದೆ.

× × ×

ಸರಕಾರೀ ನೋಕರಿ ಹುಡುಕಾಡುವವರನ್ನು ನೋಡಿದರೆ ಒಮ್ಮೊಮ್ಮೆ ಕರುಣೆ ಬರುವದು. ಯಾಕಂದರೆ ಅದಿಲ್ಲದೆ ಇದ್ದರೆ ತಮಗೆ ಸಾವೇ ಕಟ್ಟಿಟ್ಟದ್ದು ಎಂಬ ಭಾವನೆ ಅವರಲ್ಲಿ ಹಲವರಲ್ಲಿ ಕಂಡುಬರುವದು. ಇದೊಂದು ಅಸಹಾಯತೆ ಸರಕಾರಕ್ಕೂ ಒಳಿತಲ್ಲ ಜನಕ್ಕೂ ಒಳಿತಲ್ಲ; ಇಂಥ ಅತ್ಯಂತ ಸ್ವಾವಲಂಬನಶೂನ್ಯರು ಸರಕಾರೀ ನೋಕರಿಯನ್ನು ಕೂಡ ಚನ್ನಾಗಿ ಮಾಡುವದು ಕಠಿಣ. ಯಾಕಂದರೆ ಅವರಲ್ಲಿ ಒಂದು ಬಗೆಯ ಮನೋದೌರ್ಬಲ್ಯವೇ ಉಂಟಾಗಿರುವದು ಎಂದು ಹೇಳಬಹುದು. ಅದು ಶಿಕ್ಷಣದ ದೋಷವೂ ಹೌದು, ಪರಿಸ್ಥಿತಿಯ ದೋಷವೂ ಹೌದು.

× × ×

ಸ್ವಾತಂತ್ರ್ಯಪ್ರಾಪ್ತಿಯ ನಂತರ ದೊಡ್ಡ ನೋಕರಿಗಳಲ್ಲಿ ಬಹಳ ಅಸ್ಪದವುಂಟಾಗಿದೆ ಎಂಬ ಮಾತು ನಿಜವು. ಯಾಕಂದರೆ ಬ್ರಿಟಿಶರು ಸಾವಿರಗಟ್ಟಲೆ ಹೊರಟು ಹೋಗಿರುವರು. ಆ ಸ್ಥಳಗಳೆಲ್ಲ ಸ್ವಾಭಾವಿಕವಾಗಿಯೆ ನಮ್ಮ ಜನರಿಗೆ ಮೀಸಲು. ಇನ್ನು ಬ್ರಿಟಿಶರು ಆ ಸ್ಥಳಗಳನ್ನೇನೂ ಆಕ್ರಮಿಸುವಂತಿಲ್ಲ. ಹೀಗಿದ್ದರೂ ಸರಕಾರೀ ನೋಕರಿಗಳನ್ನು ಹುಡುಕುವವರು ಸಾಕಷ್ಟು ಮಾಹಿತಿ ಪಡೆದು ಪ್ರಯತ್ನ ಮಾಡುತಿರುವಂತೆ ಕಾಣುವದಿಲ್ಲ. ಈಗ ಸೈನ್ಯಖಾತೆ, ವಿಮಾನಖಾತೆ, ಹಡಗುಪಡೆಖಾತೆ ಮುಂತಾದವುಗಳಲ್ಲಿ ಕೂಡ ಬೇಕಾದಷ್ಟು ಅವಕಾಶವುಂಟಾದುದು ಸ್ಪಷ್ಟವಿದೆ. ಆದರೆ ಆ ಬಗ್ಗೆ ಪ್ರಯತ್ನ ಮಾಡುವವರು ಕಡಿಮೆ.

× × ×

ಏನೇ ಇರಲಿ. ಸರಕಾರಿ ನೋಕರಿಗಿಂತ ಸ್ವತಂತ್ರ ಉದ್ಯೋಗಗಳಲ್ಲಿ ಸೇರಿ, ವಿಶೇಷತಃ ಹೊಸ ಪದಾರ್ಥಗಳನ್ನು ನಿರ್ಮಾಣ ಮಾಡುವ ಉದ್ಯೋಗಗಳಲ್ಲಿ ಸೇರಿ ತರುಣರು ದೇಶದ ಅಭಿವೃದ್ಧಿಗೆ ಕಾರಣರಾಗುವದು ಅವಶ್ಯವಿರುವದು. ಆ ಬಗೆಯ ಅನುಕೂಲ ಶಿಕ್ಷಣವನ್ನು ಏರ್ಪಡಿಸುವದು ಸರಕಾರದ ಹಾಗೂ ಸಮಾಜದ ಹೊಣೆ ಇದೆ. ಈ ವರೆಗೆ ಕೇವಲ ಕಾರಕೂನರನ್ನು ತಯಾರ ಮಾಡುವ ಶಿಕ್ಷಣವನ್ನು ಪಡೆದು ನಮ್ಮ ಜನರು ಬಹಳ ಪರಾವಲಂಬಿಗಳೂ ಹತಬಲರೂ ಆಗಿರುವರು. ಇನ್ನು ಅದಷ್ಟು ಉತ್ಪಾದಕ ಉದ್ಯೋಗಗಳ ಪ್ರಾರಂಭ, ಅವುಗಳ ಅಭಿವೃದ್ಧಿಯಾಗುವಂತೆ ಪ್ರಯತ್ನ ಇವು ಬಹಳ ದೊಡ್ಡ ಪ್ರಮಾಣದ ಮೇಲೆ ನಡೆಯಲಿಕ್ಕೆ ಬೇಕು.

## ಲಘು ಲೇಖನ ಮತ್ತು ದೇವನಾಗರಿಟಾಯಿಪರಾಯ್ಟರ

ಹಿಂದುಸ್ತಾನಿ ಲಘುಲೇಖನ ಮತ್ತು ದೇವನಾಗರಿ ಟಾಯಿಪರಾಯ್ಟರಗಳ ಬಗೆ ಸಲಹೆಕೊಡಲು ಘಟನಾಸಮಿತಿಯ ಅಧ್ಯಕ್ಷರು ಒಂದು ಸಮಿತಿಯನ್ನು ನೇಮಿಸಿದ್ದಾರೆಂದು ಪ್ರಕಟನೆ ಹೊರಟಿದೆ. ಆಚಾರ್ಯ ಕಾಕಾಸಾಹೇಬ ಕಾಲೇಲಕರರು ಉಪಾಧ್ಯಕ್ಷರಿದ್ದು ಘಟನಾಸಮಿತಿಯ ಸಂಶೋಧನ ಅಧಿಕಾರಿ ಶ್ರೀ. ಬಾಳಕೃಷ್ಣರು ಸಮಿತಿಯ ಕಾರ್ಯದರ್ಶಿಗಳಾಗಿ ಕೆಲಸ ಮಾಡುವರು. ಮೇಲ್ಕಾಣಿಸಿದ ವಿಷಯಗಳ ಬಗ್ಗೆ ಸಲಹೆ ಸೂಚನೆ ಕಳಿಸಬೇಕೆನ್ನುವವರು ಕಾರ್ಯದರ್ಶಿಗಳಿಗೆ ಅವರ ಹೊಸದಿಲ್ಲಿ ವಿಳಾಸಕ್ಕೆ ಕಳಿಸಬೇಕು.

ಬಿಗ್ ಬೆನ್ನಿನ ಗಡಿಯಾರಕ್ಕೆ (ಅದರ ಮುಖ ಮತ್ತು ಗಂಟೆ ಸಹಿತ) ೨೨೦೦೦ ಪೌಂಡುಗಳ ಬೆಲೆಯಿದೆ.

ಟ್ರಾಜರ್ನ ಚಲಚ್ಚಿತ್ರಗಳು ಇಂದಿಗೆ ಒಟ್ಟು ೨೩ ಆಗಿವೆ.

ಕರ್ಮವೀರ

ಶ್ರೀಮುಖ್ಯಾಬ್ದ ವಿಕ್ರಮ ವರ್ಷ ೧೮೭೦ ಜೇಷ್ಠ ಬ. ೬ ಸೋಮವಾರ

# ಗವರ್ನರ ಜನರಲ್ ರಾಜಾಜಿ

ನೂರೈವತ್ತು ವರುಷಗಳ ದಾಸ್ಯವನ್ನು ಹರಿದೊಗೆದು ಸ್ವತಂತ್ರವಾದ ಭಾರತವು ತನ್ನ ಪ್ರಥಮ ಗವರ್ನರ ಜನರಲರನ್ನು ನೇಮಿಸಿಕೊಂಡು ಆಡಳಿತಾಧಿಕಾರವನ್ನು ಅವರಿಗೊಪ್ಪಿಸಿಕೊಟ್ಟಿದೆ. ಕಳೆದ ಅಗಸ್ಟಿನಲ್ಲಿಯೆ ಹಿಂದುಸ್ತಾನ ಸ್ವತಂತ್ರವಾಗಿ ತನ್ನ ಗವರ್ನರ ಜನರಲರನ್ನು ನೇಮಿಸಿಕೊಳ್ಳುವ ಅಧಿಕಾರವನ್ನು ಪಡೆದಿದ್ದರೂ ಬ್ರಿಟಿಶರಾಳಿಕೆಯಲ್ಲಿದ್ದ ಲಾರ್ಡ ಮೌಂಟಬ್ಯಾಟನ್ನರೇ ಕೆಲ ಕಾಲದ ವರೆಗೆ ತಮ್ಮ ಗವರ್ನರ ಜನರಲರಾಗಿ ಉಳಿಯಬೇಕೆಂದು ನಿರ್ಧರಿಸಿ ಅವರಿಗೇ ಅಧಿಕಾರ ಸೂತ್ರಗಳನ್ನು ಒಪ್ಪಿಸಿತ್ತು. ಅವರಾದರೂ ಅತ್ಯಂತ ಮುತ್ಸದ್ದಿತನದಿಂದ ಜಾಣಾಕ್ಷತನದಿಂದ ಮತ್ತು ನಿಷ್ಪಕ್ಷಪಾತದಿಂದ ಆಡಳಿತವನ್ನು ಸಾಗಿಸಿ ಹಿಂದೀಯರ ಆದರ, ವಿಶ್ವಾಸಗಳಿಗೆ ಪಾತ್ರರಾದುದುಂಟು. ಹಿಂದುಸ್ತಾನದ ವಿಶಿಷ್ಟ ಪರಿಸ್ಥಿತಿ, ಹಿಂದೀಯರ ಮನೋನಿರ್ಧಾರ, ಕಾರ್ಯತತ್ಪರತೆ ಮೊದಲಾದವುಗಳ ಮೂಲಕವೆ ಇಂದು ಹಿಂದುಸ್ತಾನವು ಪ್ರಗತಿಪಥವನ್ನು ಹಿಡಿದಿದೆ; ಇವಕ್ಕಾಗಿ ಲಾರ್ಡ ಮೌಂಟಬ್ಯಾಟನ್ನರು ಪ್ರಶಂಸೆಗಾಗಲಿ ನಿಂದೆಗಾಗಲಿ ಅರ್ಹರಿಲ್ಲ ಎಂದು ಕೆಲವರು ಅಭಿಪ್ರಾಯ ಪಡುತ್ತಿದ್ದರೂ ಹಿಂದುಸ್ತಾನದಲ್ಲಿ ಶಾಂತಿ ಸೌಹಾರ್ದವನ್ನು ಸ್ಥಾಪಿಸಲು ಹಿಂದೀ ಧುರೀಣರು ನಡೆಸಿದ ಪ್ರಯತ್ನಗಳಲ್ಲಿ ನಮ್ಮ ಗವರ್ನರ ಜನರಲರು ಮನಸಾ ಪ್ರಯತ್ನಿಸಿದರೆಂಬುದು ಸ್ಪಷ್ಟವಿದೆ. ಹಿಂದುಸ್ತಾನ ಸರಕಾರದ ಕೂಡ ಒಡಂಬಡಿಕೆ ಮಾಡಿಕೊಳ್ಳಿರಿ ಎಂದು ಹೈದ್ರಾಬಾದ ನಿಜಾಮರಿಗೆ ಅವರು ಬರೆದ ಕೊನೆಯ ಪತ್ರವನ್ನು ನೋಡಿದರೂ ಲಾರ್ಡ ಮೌಂಟಬ್ಯಾಟನ್ನರಿಗೆ ಹಿಂದುಸ್ತಾನದ ಬಗ್ಗೆ ಇದ್ದ ಪ್ರೇಮಅಭಿಮಾನಗಳು ವ್ಯಕ್ತವಾಗುತಿವೆ. ದಿಲ್ಲಿ ನಾಗರಿಕರು ಕೊಟ್ಟ ಮಾನಪತ್ರಕ್ಕೆ ಬ್ರಿಟಿಶ ಗವರ್ನರ ಜನರಲರಾದ ಲಾರ್ಡ ಮೌಂಟಬ್ಯಾಟನ್ನರು ಹಿಂದಿಯಲ್ಲಿ ಉತ್ತರಕೊಟ್ಟು ಹಿಂದೀಯರನ್ನು ಬೀಳ್ಕೊಟ್ಟದ್ದು ಚಿರಸ್ಮರಣೀಯವಾಗಿ ಉಳಿಯುವದೆಂಬಲ್ಲಿ ಸಂದೇಹವಿಲ್ಲ.

ಸ್ವತಂತ್ರ ಹಿಂದುಸ್ತಾನದ ಪ್ರಥಮ ಭಾರತೀಯ ಗವರ್ನರ ಜನರಲರೆಂದು ಮಾನ್ಯ ಚಕ್ರವರ್ತಿ ರಾಜಗೋಪಾಲಾಚಾರ್ಯರನ್ನು ನೇಮಿಸಿದ್ದು ಅತ್ಯಂತ ಉಚಿತವಾಗಿದೆ. ಹಿಂದೀಯರ ಅತ್ಯಂತ ಪ್ರೇಮಾದರಗಳಿಗೆ ಪಾತ್ರರಾದ ಹಿರಿಯ ಮುಖಂಡರಲ್ಲಿ ಒಬ್ಬರು, ಮಹಾ ಮುತ್ಸದ್ದಿಗಳು, ಗಾಂಧೀಜಿಯ ಅಹಿಂಸಾ ಶಾಸ್ತ್ರದ ಗರಡಿಯಲ್ಲಿ ತರಬೇತು ಹೊಂದಿ ಬಂಗಾಲದಲ್ಲಿ ಅದರ ಪ್ರಯೋಗದಿಂದ ಶಾಂತಿಯನ್ನು ಸಂಸ್ಥಾಪಿಸಿದ ಮಹಾವೀರರು ರಾಜಾಜಿಯವರು. ಈ ಸ್ಥಾನಕ್ಕೆ ಎಲ್ಲ ಬಗೆಯಿಂದಲೂ ಇವರು ಯೋಗ್ಯರಾಗಿರುವರೆಂಬುದನ್ನು ಪಾಕಿಸ್ತಾನದ ಗವರ್ನರ ಜನರಲ್ ಬ್ಯಾ. ಜಿನ್ನಾ ಮತ್ತು ಅಮೇರಿಕೆಯ ಅಧ್ಯಕ್ಷ ಟ್ರೂಮನ್ನರು ಕೂಡ ಹೊಗಳಿರುವರು. ಸದ್ಯದ ಪರಿಸ್ಥಿತಿಯಲ್ಲಿ ಎಲ್ಲದೃಷ್ಟಿಯಿಂದಲೂ ಅತ್ಯಂತ ಯೋಗ್ಯರಾಗಿರುವ ಶ್ರೀ ರಾಜಗೋಪಾಲಾಚಾರ್ಯರು ಹಿಂದುಸ್ತಾನದ ಆಡಳಿತ ಸೂತ್ರಗಳನ್ನು ವಹಿಸಿಕೊಂಡದ್ದಕ್ಕಾಗಿ ನಾವವರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇವೆ.

ಇಂದು ಹಿಂದುಸ್ತಾನವನ್ನೆದುರಿಸುವ ಪ್ರಶ್ನೆಗಳು ಅತ್ಯಂತ ಮಹತ್ವದ್ದಾಗಿವೆ. ಯುಕ್ತರಾಷ್ಟ್ರ ಸಂಘವು ಕಾಶ್ಮೀರ ಪ್ರಶ್ನೆಯಲ್ಲಿ ಪ್ರಜಾಪ್ರಭುತ್ವ ತತ್ವವನ್ನು ಬಿಟ್ಟುಕೊಟ್ಟು ಪಕ್ಷಪಾತದಿಂದ ಅದನ್ನು ಬಿಡಿಸಲಣಿಯಾಗಿದೆ. ಹೈದ್ರಾಬಾದ ಸಮಸ್ಯೆಯಿನ್ನೂ ಬಗೆಹರಿದಿಲ್ಲ. ಅಲ್ಲಿನ ಪ್ರಜೆಗಳೂ ಗಡಿಯಲ್ಲಿರುವ ಒಕ್ಕೂಟ ಪ್ರಜೆಗಳೂ ಬಗೆ ಬಗೆಯ ಕಷ್ಟನಷ್ಟಗಳನ್ನು ಅನುಭವಿಸುತಿರುವರು. ಇದಲ್ಲದೆ ಹಿಂದುಸ್ತಾನ ಪಾಕಿಸ್ತಾನ ಸಂಬಂಧವಿನ್ನೂ ಸ್ನೇಹಮಯವಾಗಬೇಕಾಗಿದೆ. ಹಿಂದುಸ್ತಾನದಲ್ಲಿ ಇಂದು ಎದ್ದ ಅನ್ನ ವಸ್ತ್ರಗಳ ಕೂಗು ಇಲ್ಲದಂತಾಗಬೇಕಾಗಿದೆ. ಉತ್ಪಾದನೆ ಹೆಚ್ಚಿ ಜನತೆಯ ಬಡತನ ಹಿಂಗಬೇಕಾಗಿದೆ. ಜಾತ್ಯಂಧತೆಯ ಸದು ಅಡಗಿ ಶಾಂತಿ ಸೌಹಾರ್ದ ಭಾವನೆ ಬೆಳೆಯಬೇಕಾಗಿದೆ. ಎಲ್ಲೆಲ್ಲಿಯೂ ಹಬ್ಬಿದ ಲಂಚಗುಳಿತನ ಇಲ್ಲದಂತಾಗಿ ಆಡಳಿತದಲ್ಲಿ ಇಂದು ಕಾಣುತಿರುವ ಒಂದು ಬಗೆಯ ಶೈಥಿಲ್ಯ ಮಾಯವಾಗಿ ಮೊದಲಿನ ಬಿಗುವು ಬರಬೇಕಾಗಿದೆ. ಜಾತೀಯ ಸೌಹಾರ್ದ ನೆಲೆಗೊಳ್ಳಬೇಕಾಗಿದೆ. ಇವೆಲ್ಲ ಮಹತ್ವದ ಸಮಸ್ಯೆಗಳನ್ನು ರಾಜಾಜಿಯವರು ಯಶಸ್ವಿಯಾಗಿ ಬಿಡಿಸುವರೆಂದು ನಂಬಿದ್ದೇವೆ. ಅಧಿಕಾರ ಸ್ವೀಕಾರದ ನಂತರ ರಾಜಾಜಿ ಮಾಡಿದ ಉಪದೇಶ ಅತ್ಯಂತ ಮನನೀಯವಾಗಿದೆ. ಅದರ ಸಾರವನ್ನು ಬೇರೆಡೆ ಕೊಟ್ಟಿದ್ದೇವೆ. ಈ ಉಪದೇಶವನ್ನು ಭಾರತೀಯರು ಚೆನ್ನಾಗಿ ಮನದಂದು ಅದರಂತೆ ನಡೆಯಹತ್ತಿದರೆ ಹಿಂದುಸ್ತಾನದ ಸಮಸ್ಯೆಗಳೆಲ್ಲ ಬಗೆಹರಿದು ಅದು ಸುಖ ಸಮೃದ್ಧಿಗಳಲ್ಲಿ ಲೋಲಾಡುವಲ್ಲಿ ಸಂದೇಹವಿಲ್ಲ.

## ಮೌಂಟ ಬ್ಯಾಂಟನ್-ಪಟೇಲ ಭೆಟ್ಟಿ



ಕಳೆದವಾರ ಗವರ್ನರ ಜನರಲ್ ಲಾರ್ಡ ಲುಯಿ ಮೌಂಟ ಬ್ಯಾಟನ್ನರು ಮಸೂರಿಯಲ್ಲಿ ಗೃಹಮಂತ್ರಿ ಸರದಾರ ಪಟೇಲರನ್ನು ಭೆಟ್ಟಿಯಾದಾಗಿನ ಚಿತ್ರ.

# ವಾರದ ಸಿಂಹಾವಲೋಕನ

### ಸಮರ್ಪಕ ಉತ್ತರ

ನಿಜಾಮ ಸರಕಾರದವರು ಹಿಂದುಸ್ತಾನ ಸರಕಾರದ ಗೂಡ ಒಡಂಬಡಿಕೆ ಮಾಡಿಕೊಳ್ಳುವಲ್ಲಿ ಕಾಲವಿಲಂಬ ಮತ್ತು ನಿಃಸಹಾಯಕ ಧೋರಣವನ್ನೇಕೆ ವಹಿಸಿರುವರೆಂಬುದು ಇದೀಗ ನಿಚ್ಚಳವಾಗಿ ಗೊತ್ತಾಗುವದು. ಚರ್ಚಿಲ್ ಪಕ್ಷವು ಬ್ರಿಟನದಲ್ಲಿ ಅಧಿಕಾರಾರೂಢವಾಗುವ ವರೆಗೆ ನಿಜಾಮರು ಸಮಯ ಕಾದಂತಿರುವರೆಂಬುದು ಕಾಮನ್ಸ ಸಭೆಯಲ್ಲಿಯ ಪ್ರಶ್ನೋತ್ತರಗಳಿಂದ ಸ್ಪಷ್ಟವಾಗುವದು. ಹೈದ್ರಾಬಾದ—ಹಿಂದುಸ್ತಾನ ಸಮಸ್ಯೆಯನ್ನು ಬಿಡಿಸಲು ಬ್ರಿಟಿಶ ಸರಕಾರವು ಮಧ್ಯಸ್ಥಿಯನ್ನು ವಹಿಸಬೇಕೆಂದು ಚರ್ಚಿಲರು ಕಾಮನ್ಸ ಸಭೆಯಲ್ಲಿ ಕೇಳಬೇಕಾದರೆ ನಿಜಾಮ ಸಾಹೇಬರು ತಮ್ಮ ಸಲಹೆಗಾರರ ಮುಖಾಂತರ ಅವರೊಡನೆ ಈ ಸಂಬಂಧದಲ್ಲಿ ವಿಚಾರ ವಿನಿಮಯ ನಡೆಸಿದ್ದರೆಂಬುದು ಗೊತ್ತಾಗುವುದು. ಹಿಂದುಸ್ತಾನ-ಹೈದ್ರಾಬಾದಗಳಲ್ಲಿ ಇನ್ನೂ ಒಪ್ಪಂದದ ಆಸೆಯಿದೆ. ನಮ್ಮ ಮಧ್ಯಸ್ಥಿಯಿಂದ ಏನೂ ಪ್ರಯೋಜನವಾಗದೆಂದು ಹೇಳಿ ಬ್ರಿಟಿಶ ಕೂಲಿಕಾರ ಸರಕಾರವು ಚರ್ಚಿಲರ ಬಿನ್ನಹವನ್ನು ನಿರಾಕರಿಸಿದ್ದು ಉಚಿತವೆ. ಹಿಂದೀ ಸಂಸ್ಥಾನಗಳು ಭಾರತದ ಭಾಗಗಳೇ ಆಗಿದ್ದು ಯಾವುದೊಂದು ಪರಾಹತಿನಲ್ಲಿ ತಮ್ಮ ಸ್ಥಾನವನ್ನು ಬೇಗನೆ ಕಲ್ಪಿಸಿಕೊಳ್ಳುವವು. ಹಿಂದುಸ್ತಾನ ಹೈದರಾಬಾದಗಳು ಕೂಡಿಯೆ ಬಾಳಬೇಕಾಗಿವೆ; ಆ ಸಮಸ್ಯೆಯಲ್ಲಿ ಕೈಹಾಕಲು ನಮಗೆ ಅಧಿಕಾರವಿಲ್ಲ ಎಂದೂ ಸರಕಾರದ ಪರವಾಗಿ ಹೇಳಲಾಯಿತು. ಹೈದರಾಬಾದ ಸಮಸ್ಯೆಯಲ್ಲಿ ಬ್ರಿಟಿಶ ಸರಕಾರದವರು ಹಿಂದುಸ್ತಾನದ ಮೇಲಿನ ತಮ್ಮ ಅಧಿಕಾರವನ್ನು ಬಿಟ್ಟುಗೊಟ್ಟನಂತರ ಮತ್ತೆ ಅದರ ಅಂತರಿಕ ಸಮಸ್ಯೆಯಲ್ಲಿ ಕೈಹಾಕುವದು ಎಂದಿಗೂ ನ್ಯಾಯ್ಯವಾಗಲಾರದು. ಇದನ್ನು ನೆನೆದು ಚರ್ಚಿಲ್ ಪ್ರಭೃತಿಗಳು ಉಪದ್ವ್ಯಾಪ ಮಾಡದಿರುವದು ಶ್ರೇಯಸ್ಕರ. ಹಿಂದುಸ್ತಾನದಗೂಡವೆ ತಾವು ಇರಬೇಕಾಗಿದೆಂಬುದನ್ನು ಚೆನ್ನಾಗಿ ಮನದಂದು ನಿಜಾಮ ಸಾಹೇಬರು ಹಿಂದುಸ್ತಾನ ಸರಕಾರವು ಮುಂದೆ ಮಾಡಿದ ಸಮಂಜಸ ಕರಾರುಗಳಿಗೆ ಒಪ್ಪಿ ತಮ್ಮ ಹಾಗು ತಮ್ಮ ಪ್ರಜೆಗಳ ಹಿತವನ್ನು ಸಾಧಿಸುವದು ಯುಕ್ತವಾಗಿದೆ.

### ರೇಲ್ವೆ ಶಾಖೆಯ ಆಡಳಿತ

ರೇಲ್ವೆ ಶಾಖೆಯ ಮಂತ್ರಿಗಳಾದ ಡಾ. ಜಾನ ಮಥಾಯಿಯವರು ಮುಂಬಯಿಯಲ್ಲಿ ಸುದ್ದಿಗಾರರ ಸಭೆಯಲ್ಲಿ ಮಾತಾಡುತ್ತ ಸಂಬಳ ಸಮಿತಿಯ ಶಿಫಾರಸಿನ ಮೇರೆಗೆ ಹೆಚ್ಚಾದ ಆಡಳಿತ ವೆಚ್ಚವನ್ನು ಸಹಿಸಬೇಕಾದರೆ ಮಿತವ್ಯಯ ಮತ್ತು ರೇಲ್ವೆ ಬಾಡಿಗೆಗಳನ್ನು ಏರಿಸುವದು ಎರಡೇ ಉಪಾಯಗಳಿರುವವೆಂದು ಹೇಳಿದರು. ಸದ್ಯದ ಪರಿಸ್ಥಿತಿಯಲ್ಲಿ ರೇಲ್ವೆ ದರಗಳನ್ನು ಏರಿಸುವದು ಶಕ್ಯವಿಲ್ಲದ್ದರಿಂದ ಮಿತವ್ಯಯದಿಂದ ವೆಚ್ಚವನ್ನು ಹಾಯಿಗೂಡಿಸುವದು ಅವಶ್ಯವೆಂದು ಅವರು ಅಭಿಪ್ರಾಯಪಟ್ಟರು. ಕೂಲಿಕಾರರು ಹೆಚ್ಚು ಉತ್ಪಾದನ ಮಾಡುವಲ್ಲಿ ಆಸ್ಥೆ ತಾಳಿದ್ದಾದರೆ ಮಾತ್ರ ಮಿತವ್ಯಯದಲ್ಲಿ ಆಡಳಿತ ಸಾಗುವದೆಂಬುದು ನಿರ್ವಿವಾದ. 'ಉತ್ಪಾದನೆಯನ್ನು ಹೆಚ್ಚಿಸುವದರ ಕಡೆಗೆ ಕೂಲಿಕಾರರ ಲಕ್ಷ್ಯವು ಇಂದು ಹೆಚ್ಚಿಗೆ ಇರದಿದ್ದುದು ದುರ್ದೈವದ ಸಂಗತಿಯು. ಅಂತೆಯೇ ಕೇಂದ್ರಮಂತ್ರಿಗಳು ಆ ಬಗ್ಗೆ ಕೂಲಿಕಾರರಿಗೆ ಉಪದೇಶ ಮಾಡಬೇಕಾದ ಪ್ರಸಂಗ ಬಂದಿದೆ. ಕೂಲಿಕಾರರು ಸಂಬಳವನ್ನು ಹೆಚ್ಚಿಸಿಕೊಳ್ಳುವ ನ್ಯಾಯ್ಯವಾದ ಮಾರ್ಗವನ್ನನುಸರಿಸುವಾಗಲೆ ಉತ್ಪಾದನೆಯನ್ನು ಹೆಚ್ಚಿಸುವ ತಮ್ಮ ಕರ್ತವ್ಯ ಮತ್ತು ಹೊಣೆಯನ್ನರಿತುಕೊಂಡು ಕಾರ್ಯಪ್ರವೃತ್ತರಾಗುವದು ಅತ್ಯವಶ್ಯವಾಗಿದೆ. ರೇಲ್ವೆಯ ವೆಚ್ಚವನ್ನು ಹೆಚ್ಚಿಸಿಕೊಳ್ಳುವ ಇನ್ನೊಂದು ಮಾರ್ಗದತ್ತ ರೇಲ್ವೆ ಶಾಖೆಯವರು ಇತ್ತೀಚೆ ದುರ್ಲಕ್ಷಿಸುತಿರುವದು ಕಂಡುಬಂದಿದೆ. ಉಗೆಬಂಡೆಗಳಲ್ಲಿ ಸ್ಥಳವಿಲ್ಲೆಂದು ತಿಕೀಟು ಕೊಡುವದನ್ನು ನಿಲ್ಲಿಸುವದುಂಟು, ಆದರೆ ಅದೇ ಕಾಲಕ್ಕೆ ಪ್ರವಾಸಿಕರನ್ನು ಅನಿರ್ಬಂಧವಾಗಿ ಸ್ಟೇಶನಗಳಲ್ಲಿ ಬಿಡುವದರಿಂದ ತಿಕೀಟುಗಳಿಲ್ಲದೆ ಪ್ರವಾಸ ಮಾಡುವವರ ಸಂಖ್ಯೆ ವಿಪರೀತ ಬೆಳೆದಿದೆ. ಅದೇರೀತಿ ಕಡಮೆ ವರ್ಗದ ತಿಕೀಟು ಪಡೆದು ಹೆಚ್ಚಿನ ವರ್ಗದ ಡಬ್ಬಿಗಳಲ್ಲಿ ಪ್ರವಾಸ ಮಾಡುವದೂ ಉಂಟು. ಈ ಸಂಬಂಧದಲ್ಲಿ ಆಡಳಿತದಲ್ಲಿ ಶೈಥಿಲ್ಯವುಂಟಾಗಿದೆಂದು ಹೇಳಿದರೆ ತಪ್ಪಾಗದು. ಈ ಲೋಪದೋಷಗಳನ್ನು ಹೋಗಲಾಡಿಸಿದರೆ ರೇಲ್ವೆಯ ಉತ್ಪನ್ನವು ಬಹಳ ಮಟ್ಟಿಗೆ ಹೆಚ್ಚುವದೆಂದು ಸೂಚಿಸದಿರಲಾರೆವು.

### ಪಾಕಿಸ್ತಾನದ ದಾರಿದ್ರ್ಯ

ಧರ್ಮಾಂಧತೆಯ ಮಬ್ಬಿನಿಂದ ಸ್ವತಂತ್ರ ರಾಷ್ಟ್ರವನ್ನು ಪಡೆದ ಪಾಕಿಸ್ತಾನಿಗಳಿಗೆ ಇಂದು ಅಲ್ಲಿನ ಬಡತನದ ಬಾಧೆ ತಟ್ಟಹತ್ತಿದೆ. ಹಿಂದುಸ್ತಾನ ಮತ್ತು ಪಾಕಿಸ್ತಾನಗಳೆರಡೂ ಕೂಡಿ ಇದ್ದಾಗ ಆಯಾ ಜನರ ಸಂಪದಭಿವೃದ್ಧಿಗೆ ಬೇಕಾದಷ್ಟು ಅನುಕೂಲತೆಗಳಿದ್ದುವು. ಆದರೀಗ ಅದು ಶಕ್ಯವಿಲ್ಲದಂತಾದ್ದರಿಂದ ಪಾಕಿಸ್ತಾನ ಮಂತ್ರಿಗಳು ದೇಶದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವತ್ತ ಜೋರಿನಿಂದ ಪ್ರಯತ್ನ ನಡೆಸಿದ್ದಾರೆ. 'ಪಾಕಿಸ್ತಾನಿಯೊಬ್ಬನ ವಾರ್ಷಿಕ ಸರಾಸರಿ ಉತ್ಪನ್ನ ಕೇವಲ ೧೦ ಶಿಲ್ಲಿಂಗು ಇದ್ದು ಮಾನವನಿಗೆ ಅನುಚಿತವಾದ ರೀತಿಯಲ್ಲಿ ಅವನು ಬಾಳುತಿರುವನು, ಅವನಿಗೆ ತೊಡಲು ಬಟ್ಟೆ ಇಲ್ಲ ಅನ್ನ ಸಿಕ್ಕರೆ 'ಅವನ ದೈವ ಎಂದು ಮುಂತಾಗಿ ಹೇಳಿ ಅವರ ಜೀವನ ಮಟ್ಟವನ್ನು ಸುಧಾರಿಸಬೇಕಾದರೆ ಸುಶಿಕ್ಷಿತ ತರುಣರು ಕಲೆ ಸಾಹಿತ್ಯ ಕಾಯದೆಯ ವಿದ್ಯೆಯನ್ನು ಬಿಟ್ಟು ಕೈಗಾರಿಕೆ ಮತ್ತು ಯಂತ್ರ ವಿದ್ಯೆಯನ್ನು ಕಲಿಯಬೇಕು' ಎಂದು ಪಾಕಿಸ್ತಾನದ ಅರ್ಥಸಚಿವರಾದ ಗುಲಾಮ ಮಹಮ್ಮದರು ಲಂಡನದಲ್ಲಿ ಪಾಕಿಸ್ತಾನ ವಿದ್ಯಾರ್ಥಿಗಳನ್ನುದ್ದೇಶಿಸಿ ಭಾಷಣ ಮಾಡುತ್ತ ಹೇಳಿದರು. ಪಾಕಿಸ್ತಾನದ ಉತ್ಪನ್ನವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಅಲ್ಲಿನ ಮಂತ್ರಿಗಳು ವಿವಿಧ ರೀತಿಯಿಂದ ಪ್ರಯತ್ನಿಸುತಿರುವರೆಂದು ಇದರಿಂದ ಗೊತ್ತಾಗುವದು. ಹಿಂದುಸ್ತಾನದ ತರುಣರಾದರೂ ದೇಶದ ಉತ್ಪಾದನೆಯನ್ನು ಹೆಚ್ಚಿಸುವತ್ತ ಗಮನಿಸುವದು ಅತ್ಯವಶ್ಯವೆಂಬುದು ಇದರಿಂದ ಸ್ಪಷ್ಟವಾಗುವದು.

### ಅನುಚಿತ ಧೋರಣ

ಇಪಿ ಫಕೀರನ ಗೂಡ ಸಂಬಂಧ ಬೆಳಸಿ ಪಾಕಿಸ್ತಾನ ಸರಕಾರವನ್ನುರುಳಿಸುವ ಒಳಸಂಚು ನಡೆಸಿರುವರೆಂಬ ಆರೋಪದ ಮೇಲೆ ಸರಹದ್ದ ಸರಕಾರ ಖಾನ ಅಬ್ದುಲ್ ಗಫರಖಾನರನ್ನು ಸೆರೆ ಹಿಡಿದು ಮೂರು ವರ್ಷ ಸಶ್ರಮ ಶಿಕ್ಷೆ ವಿಧಿಸಿ ಸೆರೆಮನೆಗಟ್ಟಿದ್ದು ಅತ್ಯಂತ ಅನುಚಿತ ಧೋರಣವೆಂದು ಹೇಳಬಹುದಾಗಿದೆ. ಸತ್ಯ ಅಹಿಂಸೆಗಳಲ್ಲಿ ಗಾಂಧಿಜಿಯ ನಿಷ್ಠ ಅನುಯಾಯಿಗಳೆಂದು ಪ್ರಸಿದ್ಧರಾದ ಖಾನರ ಮೇಲೆ ಇಂತಹ ಆರೋಪ ಹೊರಿಸುವುದು ಧಾಷ್ಟ್ಯದ ಮಾತೇ ಸರಿ. ಖಾನಬಂಧುಗಳ ಬಗ್ಗೆ ಸದ್ಯದ ಸರಹದ್ದ ಮುಖ್ಯ ಮಂತ್ರಿ ಅಬ್ದುಲ್ ಕಯಾಮಖಾನರ ಧೋರಣವು ಸೇಡು ತೀರಿಸಿಕೊಳ್ಳುವಂತಹದಾಗಿದೆಂಬುದು ಇದರಿಂದ ಸ್ಪಷ್ಟವಾಗುವದು. ಶಾಸನ ಸಭೆಯ ಚುನಾವಣೆಯಲ್ಲಿ ಉರುಳಿ ಜಿನ್ನಾರವರ ಕೃಪಾಪೋಷಿತರಾಗಿ ಮುಖ್ಯ ಮಂತ್ರಿತ್ವವನ್ನು ಪಡೆದ ಕಯಾಮಖಾನರು ಅವರು ಹೇಳಿದಂತೆ ಕುಣಿಯಲೇಬೇಕಲ್ಲವೆ? ಆದರೆ ಖಾನ ಬಂಧುಗಳು ಇಂಥ ದಬ್ಬಾಳಿಕೆಗಾಗಲಿ ಯಾವದೇ ಬಗೆಯ ಬೆದರಿಕೆಗಾಗಲಿ ಸೊಪ್ಪು ಹಾಕುವದಿಲ್ಲೆಂಬುದನ್ನು ಕಯಾಮಖಾನರು ಇನ್ನೂ ತಿಳಿಯದಿರುವದು ದುರ್ದೈವದ ಸಂಗತಿ. ನಿಜವಾದ ಸ್ವಾತಂತ್ರ್ಯಕ್ಕಾಗಿ ಜನಸಾಮಾನ್ಯವನ್ನು ತರಬೇತುಗೊಳಿಸುವ ತಮ್ಮ ಕಾರ್ಯದಿಂದ ತಾವೆಂದೂ ಪರಾವೃತ್ತರಾಗಲಾರೆವೆಂದು ಡಾ. ಖಾನಸಾಹೇಬರು ಈಗಾಗಲೆ ಹೇಳಿ ಕಯಾಮಖಾನರಿಗೆ ಸರಿಯಾದ ಉತ್ತರ ಕೊಟ್ಟಿದ್ದಾರೆ.

# ಸ್ವಚ್ಛಂದ ಪ್ರಾಂತೀಯತೆ

ಬಿಹಾರ ಸರಕಾರದ ಕಂಪಾಯ ಶಾಖೆಯ ಕಾರ್ಯದರ್ಶಿ ೪೮ ಗಣಿ ಕಂಪನಿಗಳಿಗೆ ಕಳಿಸಿದ ಪರಿಪತ್ರದ ಕಡೆಗೆ ಒಬ್ಬರು ನನ್ನ ಲಕ್ಷ್ಯವನ್ನು ಸೆಳೆದಿದ್ದಾರೆ. ಆ ಪರಿಪತ್ರ ಇಂತಿದೆ:

"ಪಾಟಣಾ ತಾ. ೧೫ ಜನೆವರಿ ೧೯೪೮

ವಿಷಯ: ಸಿಂಗ ಭೂಮಿಯ ಗಣಿ ಕಂಪನಿಗಳ ಒಡೆಯರು ಬಿಹಾರಿಗಳಿಗೆ ಉದ್ಯೋಗ ಕೊಡುವದು.

"ಮಹನೀಯರೆ,

"ಪ್ರಾಂತೀಯ ಸರಕಾರದ ಹೊಸ ಗಣಿ ಧೋರಣೆಯ ನಿಯಮವನ್ನು ನಿಮ್ಮ ಗಮನಕ್ಕೆ ತರಲು ನನಗೆ ಅಜ್ಞೆಯಾಗಿದೆ. ಸರಕಾರದವರು ಸ್ಥಾಪಿಸಲಿರುವ ಮಂಡಲದವರ ಸೂಚನೆಯನ್ನನುಸರಿಸಿಯೆ ದುಡಿಯುವ ಆಳುಗಳಲ್ಲದ ಉಳಿದ ನೌಕರರನ್ನು ತೆಗೆದುಕೊಳ್ಳಬೇಕು. ಇದಕ್ಕೊಪ್ಪದ ಸಂಸ್ಥೆಗಳಿಗಾಗಲಿ ವ್ಯಕ್ತಿಗಳಿಗಾಗಲಿ ಇನ್ನುಮುಂದೆ ಗಣಿಯ ಲೈಸನ್ಸುಗಳನ್ನು ಕೊಡಲಾಗುವದಿಲ್ಲ. ಸಾಮಾನ್ಯವಾಗಿ ಬಿಹಾರಿಗಳಿಗೆ ವಿಶೇಷತಃ ಸ್ಥಳಿಕ ಜನರಿಗೆ ಯೋಗ್ಯ ನೌಕರಿಗಳು ದೊರೆಯುವದಿಲ್ಲೆಂದು ಪದೇ ಪದೇ ದೂರುಗಳು ಬರುತ್ತಿರುವದರಿಂದ ಸರಕಾರ ಈ ನಿರ್ಣಯಕ್ಕೆ ಬಂದಿದೆ. ಸದ್ಯಕ್ಕೆ ಇರುವ ಗೇಣೀ ಪತ್ರಗಳಲ್ಲಿ ಇಂಥ ಕರಾರು ಇಲ್ಲವೆಂಬದು ನಿಜ. ಆದರೆ ಸರಕಾರದ ಈ ಧೋರಣೆಯನ್ನು ಆಚರಣೆಗೆ ತರುವ ಅವಶ್ಯಕತೆಯನ್ನು ಲಾಯಸೆನ್ಸದಾರರ ಮನಸಿಗೆ ಬಿಂಬಿಸಬೇಕೆಂದು ಸರಕಾರ ಇಚ್ಛಿಸುತ್ತದೆ. ಈ ಪತ್ರದ ಬಗ್ಗೆ ನೀವೇನು ಕ್ರಮ ತೆಗೆದುಕೊಳ್ಳುವಿರೆಂದು ಸರಕಾರಕ್ಕೆ ವರದಿ ಮಾಡುವಿರಾಗಿ ಅಪೇಕ್ಷಿಸುತ್ತೇನೆ.

ನಿಮ್ಮ

ಕಾರ್ಯದರ್ಶಿ

ಈ ಪರಿಪತ್ರ ಹೊರತೋರಿಕೆಗೆ ಬಿಹಾರಿಗಳ ಹಿತಕ್ಕಾಗಿ ಎಂದಿದ್ದರೂ ಅದು ನಿಜವಾಗಿ ಬಿಹಾರದ ಬಂಗಾಲಿ-ಮಾತಾಡುವ ಅಲ್ಪಸಂಖ್ಯಾಕರ ವಿರುದ್ಧ ಕೈಕೊಂಡ ಅಭಿಯೋಗವೆಂದೂ ಕೃತಿಯಲ್ಲಿ ಅದು ಅವರ ವಿರುದ್ಧವೇ ಪರಿಣಮಿಸುವದೆಂದೂ ಪತ್ರಲೇಖಕನು ಆರೋಪಿಸಿದ್ದಾನೆ.

ಪತ್ರಲೇಖಕನ ಈ ದೋಷಾರೋಪಣೆ ಎಷ್ಟು ನ್ಯಾಯವೆಂದು ನಾನರಿಯೆ. ಆದರೂ ಈ ಪರಿಪತ್ರ ಸರ್ವಥಾ ಯೋಗ್ಯವಲ್ಲೆಂದು ನಾನು ಖಂಡಿತವಾಗಿ ಹೇಳಬಲ್ಲೆ. ಸ್ವತಂತ್ರ ಹಿಂದುಸ್ತಾನದ ಘಟನೆಯಲ್ಲಿ ಪ್ರತಿಯೊಬ್ಬ ಹಿಂದೀ ನಾಗರಿಕನಿಗೆ ಭಾರತದ ಯಾವದೇ ಭಾಗದಲ್ಲಿ ಹೋಗಿ ಉಳಿಯುವ ಮತ್ತು ನೆಲಸುವ ಅಧಿಕಾರವಿರುವದು ನಿಜವಾದರೆ, ಒಕ್ಕೂಟದ ಯಾವದೊಂದು ಘಟಕವೂ ತನ್ನ ಪ್ರದೇಶದಲ್ಲಿ ಬಂದು ನೆಲಸಿದವನನ್ನು ಅವನಿಗೊಗ್ಗುವ ಜೀವನೋಪಾಯ ಕೈಕೊಳ್ಳದಂತೆ ತಡೆಯತಕ್ಕದ್ದಲ್ಲವೆಂಬದು ಸ್ವಯಂವೇದ್ಯ ವಿಧಿಯೆಂದು ನನಗನಿಸುತ್ತದೆ. ಕಾಂಗ್ರೆಸಿನ ಎಣಿಕೆಯ ಮೇರೆಗೆ ಆದ ಸರಕಾರ ತನ್ನ ಪ್ರಾಂತದಲ್ಲಿ ವ್ಯಾಪಾರಿಗಳು ಒಂದು ವಿಶಿಷ್ಟ ವರ್ಗದ ಜನರನ್ನೇ ನೇಮಿಸಿಕೊಳ್ಳಬೇಕೆಂದು ನಿರ್ಬಂಧಿಸುವದು ವಿಹಿತವೇ ಎಂದು ನನಗೆ ಗಾಢವಾದ ಸಂದೇಹವುಂಟು. ತಮ್ಮ ನೌಕರರನ್ನು ನೇಮಿಸಿಕೊಳ್ಳುವ ವಿಷಯದಲ್ಲಿ ಒಡೆಯರಿಗಿರುವ ಹಕ್ಕಿನ ಮೇಲೆ ಇದೊಂದು ಅಪೂರ್ವ ಆಕ್ರಮಣವೆಂದೂ ನಾನು ಬಗೆಯುವೆ.

ಈ ಪರಿಪತ್ರದ ಬಗ್ಗೆ ಇಷ್ಟು ಹೇಳಿ, ಬಿಹಾರದ ಬಂಗಾಲಿಗಳಿಗೂ ಅದರಂತೆಯೆ ಬೇರೆ ಪ್ರಾಂತಗಳಿಗೆ ಹೋಗಿ ನೆಲಸುವ ಮಾರವಾಡಿ, ಗುಜರಾಥಿ, ಸಿಂಧಿ ಮೊದಲಾದ ಜನರಿಗೂ ಒಂದು ಸೂಚನೆ ಕೊಡಬಯಸುತ್ತೇನೆ. ತಾವು ವಲಸೆ ಹೋದ ಪ್ರಾಂತದ ಜನರ ಜೀವನದಲ್ಲಿ ಸಂಪೂರ್ಣ ಬೆರೆತು ಹೋಗುವದು ಅವರ ಕರ್ತವ್ಯ. ಹೊಸ ವಸತಿ ಸ್ಥಾನದಲ್ಲಿ ತಮ್ಮ ಮೂಲ ಪ್ರಾಂತೀಯ ಪ್ರತ್ಯೇಕತೆಯನ್ನು ವಲಸೆಗಾರರು ಉಳಿಸಿಕೊಂಡು ಹೋಗುವದು ರಾಷ್ಟ್ರದ ದೃಷ್ಟಿಯಿಂದ ಏನೂ ಹಿತಕರವಲ್ಲ. ಬಂಗಾಲಿ, ಗುಜರಾಥಿ, ಮಾರವಾಡಿ, ಸಿಂಧಿಗಳೇ ಮುಂತಾದವರು ಬಿಹಾರದಲ್ಲಿ ಶಾಶ್ವತವಾಗಿ ನೆಲಸಬಯಸುವದಾದರೆ ಅವರು ಸಂಪೂರ್ಣವಾಗಿ ಬಿಹಾರಿಗಳೇ ಆಗಬೇಕಾಗುವದು. ಒಂದು ಪ್ರಾಂತದಿಂದ ಇನ್ನೊಂದರಲ್ಲಿ ಹೋಗಿ ನೆಲೆಯೂರುವವರು ತಮ್ಮ ಹೊಸ ಪ್ರಾಂತದಲ್ಲಿ ಜಾತೀಯ, ಪ್ರಾಂತೀಯ ಇಲ್ಲವೆ ಮತ್ತಾವದೇ ಬಗೆಯ ಅಲ್ಪಸಂಖ್ಯಾಕ ಸಮಸ್ಯೆ ಉದ್ಭವಿಸದಂತೆ ನೋಡಿಕೊಳ್ಳಲು ಬದ್ಧರಾಗಿದ್ದಾರೆ. ಅವರು ತಮ್ಮ ಹೊಸ ಮಾತೃಭೂಮಿಯ ಭಾಷೆಯನ್ನು ಅಲ್ಲಿಯೇ ಹುಟ್ಟಿ ಬೆಳೆದವರಷ್ಟೇ ಚೆನ್ನಾಗಿ ಮಾತಾಡಲು ಕಲಿಯಬೇಕಲ್ಲದೆ ಅಲ್ಲಿಯ ವೇಷಭೂಷೆ ಆಚಾರವಿಚಾರಗಳನ್ನು ಆದಷ್ಟುಮಟ್ಟಿಗೆ ಅನುಕರಿಸತಕ್ಕದ್ದು. ಬಿಹಾರಿಗಳ ಧೋರಣೆಯಿಂದ ನೋಯುವ ಬಂಗಾಲಿಗಳೆ ಮೊದಲಾದ ಬಿಹಾರೀತರ ಬಿಹಾರ ನಿವಾಸಿಗಳಿಗೆ ಒಂದು ಪ್ರಶ್ನೆಯನ್ನು ಕೇಳಬಹುದು. ಶತಮಾನಗಳವರೆಗೆ ಬಿಹಾರದಲ್ಲಿ ವಾಸ ಮಾಡಿಯೂ ನೀವು ಪೂರ್ಣ ಬಿಹಾರಿಗಳಾಗದೆ ಇನ್ನೂ ಬಂಗಾಲಿ, ಮಾರವಾಡಿ, ಗುಜರಾಥಿಗಳೇ ಆಗಿ ಹೇಗೆ ಉಳಿದಿರಿ? ನೀವು ನಿಮ್ಮ ಬಂಗಾಲಿತ್ವ, ಮಾರವಾಡಿತ್ವ ಮೊದಲಾದವನ್ನು ಉಳಿಸಿಕೊಳ್ಳಲೇಬೇಕೆಂಬ ಛಲತೊಟ್ಟರೆ ಬಿಹಾರಿಗಳು ನಿಮ್ಮನ್ನು ತಮ್ಮ ನಡುವೆ ಸೇರಿಕೊಂಡ ಹೊರಗಿನವರೆಂದು ಬಗೆಯುವದರಲ್ಲಿ ತಪ್ಪೇನು? ಸಮಾನತೆಯನ್ನು ಬಯಸುತ್ತಿದ್ದರೆ ನೀವೂ ಮುಂದೆ ಹೋಗಬೇಕು.

ನಾನು ಬಿಹಾರನ್ನು ಇಲ್ಲಿ ಉಲ್ಲೇಖಿಸಿದ್ದರೂ ಇದೇ ತತ್ವ ಎಲ್ಲ ಪ್ರಾಂತಗಳಿಗೂ ಅನ್ವಯಿಸುತ್ತದೆ. ಸಿಂಧ ಪಂಜಾಬ ಮೊದಲಾದೆಡೆಗಳಿಂದ ಬಂದ ನಿರಾಶ್ರಿತರ ಸಮಸ್ಯೆಯನ್ನು ಪ್ರತಿಯೊಂದು ಪ್ರಾಂತವೂ ಎದುರಿಸಬೇಕಾಗಿರುವಾಗ ಇದಕ್ಕೆ ಇನ್ನಷ್ಟು ಮಹತ್ವ ಬಂದಿದೆ. ಈ ನಿರಾಶ್ರಿತರು ತಮ್ಮ ಹೊಸ ಪ್ರದೇಶದ ಜನಜೀವನದಲ್ಲಿ ಎಷ್ಟು ಬೇಗ ಬೆರೆತುಹೋದರೊ ಅಷ್ಟುಮಟ್ಟಿಗೆ ಈ ಸಮಸ್ಯೆ ಸರಳವಾಗುವದು. ಬದಲಿಗೆ ಪ್ರತಿ ಪ್ರಾಂತದಲ್ಲಿ ನಯಾ ಸಿಂಧ, ನಯಾ ಪಂಜಾಬ ಜಿಲ್ಹೆ ತಹಶೀಲುಗಳಾಗಬೇಕೆಂದು ಅವರು ಬೇಡಿದರೆ ಅವರು ಅಪರಿಹಾರ್ಯ ಸಮಸ್ಯೆಗಳನ್ನು ಉಂಟು ಮಾಡುವರು.

ವರ್ಧಾ ಕೆ. ಘ. ಮಶ್ರೂವಾಲಾ
೧೫—೬—೪೮

# ಸತ್ಯಾಗ್ರಹಾಶ್ರಮದ ಇತಿಹಾಸ

ಗಾಂಧೀಜಿ ೧೯೩೨ರಲ್ಲಿ ಎರವಡಾದೊಳಗೆ ಸ್ಥಾನಬದ್ಧರಾದಾಗ ೫—೪—೩೨ರ ದಿನ ಸತ್ಯಾಗ್ರಹಾಶ್ರಮದ ಇತಿಹಾಸವನ್ನು ಗುಜರಾತಿಯಲ್ಲಿ ಬರೆಯಲು ಪ್ರಾರಂಭಿಸಿದರು. ೧೧-೭-೩೨ರವರೆಗೆ ಈ ಕೆಲಸ ನಡೆದು ಅಂದು ಒಮ್ಮಿಗೆ ನಿಂತುಹೋಯ್ತು. ಕೊನೆಯ ವಾಕ್ಯವನ್ನು ಮುಗಿಸುವದು ಕೂಡ ಆಗಲಿಲ್ಲ. ಆ ಮೇಲೆ ಅವರು ಆ ಕೆಲಸವನ್ನು ಮತ್ತೆ ಕೈಕೊಳ್ಳಲೇ ಇಲ್ಲ. ಅಂದಿನ ಹಸ್ತಪತ್ರಿಕೆಯನ್ನೇ ಇದ್ದಕ್ಕಿದ್ದಂತೆ ನವಜೀವನ ಮುದ್ರಣಾಲಯದವರು ಶ್ರೀ ಕಾಕಾ ಕಾಲೇಲಕರರ ಮುನ್ನುಡಿಯೊಡನೆ ಇತ್ತೀಚೆಗೆ ಪ್ರಕಟಿಸಿದ್ದಾರೆ. ಯಥಾವಕಾಶ ಅದರ ಭಾಷಾಂತರಗಳೂ ಪ್ರಕಟವಾಗಬಹುದು.

ಇತಿಹಾಸ ಮತ್ತು ಸತ್ಯಾಗ್ರಹಾಶ್ರಮ ಎಂಬ ಎರಡೂ ಶಬ್ದಗಳನ್ನು ಗಾಂಧೀಜಿ ವಿಶೇಷಾರ್ಥದಲ್ಲಿ ಪ್ರಯೋಗಿಸಿದ್ದಾರೆ. ಸತ್ಯಾಗ್ರಹಾಶ್ರಮವೆಂದರೆ ಸಾಬರಮತಿಯಲ್ಲಿದ್ದ ಈ ಹೆಸರಿನ ಸಂಸ್ಥೆಯೇ ಎಂದು ಅರ್ಥವಲ್ಲ. ಆದರೆ ಬ್ರಹ್ಮಚರ್ಯಾಶ್ರಮ, ಗೃಹಸ್ಥಾಶ್ರಮ ಎಂಬ ಹಿಂದು ಆಶ್ರಮ ವ್ಯವಸ್ಥೆಯ ರಹಸ್ಯವೇ ಈ ಶಬ್ದ ಪ್ರಯೋಗದಲ್ಲಿಯಾದರೂ ಇದೆ. ಆಶ್ರಮ ಎಂಬ ಶಬ್ದಕ್ಕೆ ಗಾಂಧೀಜಿ, "ಧರ್ಮಭಾವದಿಂದ ಕೂಡಿದ ಸಾಂಘಿಕ ಜೀವನ" ಎಂಬುದಾಗಿ ಭಾಷ್ಯ ಹೇಳಿದ್ದಾರೆ.

ಇಲ್ಲಿ ಇತಿಹಾಸ ಎಂಬ ಶಬ್ದಕ್ಕೂ ವಾಡಿಕೆಯ ಅರ್ಥವಿಲ್ಲ. ಸಾಬರಮತಿ ಸಂಸ್ಥೆಯಲ್ಲಿ ಇನ್ನೆಲ್ಲಿಯೋ ಆದ ಘಟನೆಗಳ, ಮಾರ್ಪಾಟುಗಳ, ಚಟುವಟಿಕೆಗಳ, ಅಲ್ಲಿಯ ವ್ಯಕ್ತಿಗಳ, ಜನನ ಮರಣಗಳ ಕಾಲಾನುಕ್ರಮ ವಿವರ ಇಲ್ಲಿ ಇಲ್ಲ. ಸತ್ಯ, ಪ್ರಾರ್ಥನೆ, ಅಹಿಂಸೆ, ಬ್ರಹ್ಮಚರ್ಯ ಹಾಗೂ ಇನ್ನುಳಿದ ನಿಯಮಗಳು ಕಾಲಕಾಲಕ್ಕೆ ಹೇಗೆ ರೂಪಗೊಂಡು ಆಚರಣೆಯಲ್ಲಿಯೋ ಅನುಸಂಧಾನದಲ್ಲಿಯೋ ಹೇಗೆ ಬೆಳೆದು ಬಂದವೆಂಬುದನ್ನು ಇಲ್ಲಿ ಅರಿಯಬಹುದು. ಇದನ್ನು ನಿರೂಪಿಸುವಾಗಲೂ ಕಾಲಾನುಕ್ರಮವನ್ನು ಗಮನಿಸಿಲ್ಲ. ಕೆಲ ಸಂದರ್ಭಗಳಲ್ಲಿ ವಿಚಾರಗಳ ಅನುಸಂಧಾನಕ್ಕೆ ಮೂರ್ತಸ್ವರೂಪ ಬಂದ ಅಥವಾ ಮಾರ್ಪಾಟು ಉಂಟಾದ ಬಗೆಯನ್ನು ಗಾಂಧೀಜಿ ಹೇಳಿರುವರಾದರೂ ಅವುಗಳ ಬಗ್ಗೆ ತಮ್ಮ ಕೊನೆಯ ತೀರ್ಮಾನಗಳನ್ನು ಅವುಗಳನ್ನು ಬರೆದಿಟ್ಟ ದಿನವೇ ಹೇಳಿದ್ದಾರೆಂದು ಬೇಳಬಹುದು. ಈ ಬರೆಹವನ್ನು ಅವರು ಮುಗಿಸಲಿಲ್ಲವೆಂಬುದು ಬಹಳ ವಿಷಾದಕರ ವಿಷಯ. ಅಪೂರ್ಣವಾಗಿದ್ದರೂ ಇದ್ದ ಸ್ಥಿತಿಯಲ್ಲಿ ಸಹ ಈ ನಿರೂಪಣೆಯು ಅತ್ಯಂತ ಬೋಧಪ್ರದವೂ ಉಪಯುಕ್ತವೂ ಆಗಿದೆ. ಅವಕಾಶವೂ ಸ್ಥಳವೂ ದೊರಕಿದಲ್ಲಿ ಅದರಿಂದ ಕೆಲ ಭಾಗಗಳನ್ನು ಆಯ್ದು ಭಾಷಾಂತರಿಸಿ ಇಂಗ್ಲೀಷ ಹರಿಜನದ ಓದುಗರಿಗಾಗಿ ಕೊಡಬಹುದು.

ವರ್ಧಾ ಕಿಶೋರಲಾಲ ಮಶ್ರೂವಾಲಾ
೧೬—೬—೧೯೪೮ (ಹರಿಜನ)

# ಬಾದಶಹಾಖಾನ

ಗಡಿನಾಡ ಸರಕಾರವು ಖಾನಸಾಹೇಬ ಗಫರಖಾನರನ್ನು ೩ ವರ್ಷ ಶಿಕ್ಷೆ ವಿಧಿಸಿ ಸೆರೆಮನೆಗೆ ಕಳಿಸಿದೆ. ಲಂಚಕ್ಕೂ ಮುರವತ್ತಿಗೂ ಒಳಗಾಗದ ಪ್ರಾಮಾಣಿಕ ದೇಶಭಕ್ತರನ್ನು ಸೆರೆಗಟ್ಟುವದಕ್ಕಿಂತ ಹೆಚ್ಚಿನ ಒಳ್ಳೆಯುದನ್ನು ಮಾಡದಂತಹ ಪ್ರಸಂಗವು ಒಂದು ಸರಕಾರಕ್ಕೆ ಬರುವದೆಂದರೆ ಆ ಸರಕಾರವು ತನ್ನ ವಿರುದ್ಧವೇ ತಾನು ಅವಿಶ್ವಾಸದ ಗೊತ್ತುವಳಿ ಮಾಡಿಕೊಂಡಂತೆಯೇ ಸರಿ. ಕೂಡಲೇ ರಾಜೀನಾಮೆ ಕೊಟ್ಟು ಹೊರಬೀಳದಿದ್ದರೂ ಇದೇನು ಕಡಮೆ ಪ್ರಭಾವಶಾಲಿಯಾದುದಲ್ಲ.

ವರ್ಧಾ ಕಿಶೋರಲಾಲ ಮಶ್ರೂವಾಲಾ
೨೧—೬—೧೯೪೮ (ಹರಿಜನ)

# ಜಾತಿನಿರ್ಮೂಲನ ಮಾಡುವುದು ಹೇಗೆ ?

ಸೇವಾಗ್ರಾಮದಲ್ಲಿ ನಡೆದ ರಚನಾತ್ಮಕ ಕಾರ್ಯಕರ್ತರ ಸಮ್ಮೇಳನದಲ್ಲಿ ಎದ್ದು ಕಾಣುವ ಠರಾವುಗಳು ಮುಖ್ಯಾಂಶಗಳೆನಿಸಿದವು: (೧) ಪವಿತ್ರಸಿದ್ಧಿಗೆ ಪವಿತ್ರ ಸಾಧನವಿರಬೇಕೆಂಬ ಶ್ರದ್ಧೆಯ ನಿಃಸಂದಿಗ್ಧ ಪುನಘೋಷಣೆ ಮತ್ತು (೨) ದುರುಪಯೋಗಕ್ಕೆ ಅವಕಾಶವಿಲ್ಲದ ಜಾತ್ಯತೀತ ಸಮಾಜವನ್ನು ರಚಿಸಬೇಕೆಂಬ ಗಾಂಧೀಜಿಯ ಕನಸನ್ನು ನನಸಾಗಿಸಲು ದುಡಿಯಬೇಕೆಂಬ ದೃಢಪ್ರತಿಜ್ಞೆ.

ಜಾತಿ ಮತ್ತು ಮನುಷ್ಯನು ಮನುಷ್ಯನನ್ನು ದುರುಪಯೋಗಪಡಿಸಿಕೊಳ್ಳುವುದು ಇವೆರಡೂ ಪ್ರಾಚೀನ ಪದ್ಧತಿಗಳು. ಮೊದಲಿನಿಂದ ಸ್ವಬುದ್ಧಿಯಿಂದ ಕಡಿಮೆ ಬುದ್ಧಿಯುಳ್ಳ ತನ್ನ ಸಹೋದರರನ್ನು ತನ್ನನ್ನು ಪಾಲಕ ಮತ್ತು ಯಜಮಾನ ಎಂದು ತಿಳಿದು ವಿಧೇಯತೆಯಿಂದ ನಡೆದುಕೊಳ್ಳುವಂತೆ ಮಾಡಿ ಅವನ ಶ್ರಮದ ಫಲವನ್ನು ತಾನು ಉಣ್ಣುವ ಉಪಾಯವನ್ನು ರಚಿಸಲು ಮನುಷ್ಯನು ಕಲಿತನು. ಈ ಕಾರ್ಯಗತಿಯು ಬಹುಬೇಗ ಮಾನವ ಸಮಾಜದಲ್ಲಿ ಸುಸ್ಥಿರವಾದ ಹಕ್ಕುಗಳು, ಅಧಿಕಾರಗಳು ಎನಿಸಿಬಿಟ್ಟವು. ಈ ಮಾನವಸಮಾಜವು ಹುಟ್ಟು, ವರ್ಗ ಮತ್ತು ಶ್ರೇಷ್ಠೋಹಂಬುದ್ಧಿ ಇವುಗಳ ಮೇಲೆ ಒಂದು ಕಡೆಯಲ್ಲೂ ಅವಕಾಶವಿಲ್ಲದುದರಿಂದ ಉಂಟಾದ ಸ್ಥಿರವಾದ ಆಯೋಗ್ಯತೆ, ನೀಚೋಹಂಬುದ್ಧಿ ಮತ್ತು ಮಾನವ ಪ್ರಗತಿಯನ್ನು ತಡೆಹಿಡಿಯುವುದು ಇವುಗಳ ಮೇಲೆ ಮತ್ತೊಂದು ಕಡೆಯಲ್ಲೂ ನಡೆಯುತ್ತ ಹೋಯಿತು. ಇದರ ಫಲವಾಗಿ ವಿವಿಧವಾದ ದಾಸ್ಯದ ಮತ್ತು ಅರೆದಾಸ್ಯದ ಪದ್ಧತಿಗಳು ಸಮಾಜದಲ್ಲಿ ಬೆಳೆದು ಬಂದು ಮಾನವ್ಯಶ್ರಮವನ್ನು ಪೂರ್ಣವಾಗಿ ವ್ಯರ್ಥಗೊಳಿಸಿ ಮಾನವನ ಇತಿಹಾಸಕ್ಕೆ ಕಪ್ಪು ಬಳಿದವು.

ಹಿಂದುಗಳಲ್ಲಿರುವಂತೆ ಇರುವ ಜಾತಿಯು ಅಂಥ ಬುದ್ಧಿವಿಕಾರಗಳ ಅತಿ ಕೆಟ್ಟದಾದ ರಿಯೆಂದು ತೋರುತ್ತದೆ. ನಮ್ಮ ಇಡೀ ಸಾಮಾಜಿಕ ವಿಕಾಸದಲ್ಲಿ ಉದ್ಭಕ್ಕೂ ಅದು ನಮ್ಮನ್ನು ಅಧೋಗತಿಗಿಳಿಸಿ ವಿಘಟನೆಗೀಡು ಮಾಡಿದ್ದು ಬಹುಶಃ ಅಸ್ವಾದ್ಯಕರವಾಗಿದೆಯೆನ್ನಬಹುದು. ಪ್ರಾಚೀನ ಯೆಹೂದಿಗಳಲ್ಲಿದ್ದಂತೆ ನಮ್ಮಲ್ಲಿ ಅದು ಸಾಮಾಜಿಕ ಶ್ರೇಷ್ಠತೆಯ ಕೃತಕ ಬುದ್ಧಿಯನ್ನು ಬೆಳೆಯಿಸಿದೆ. ವಿಶೇಷತಃ ನಮ್ಮ ತಿನಿಸು ಉಣಿಸು, ಕುಡಿತ ಕೆಲೆತಗಳಲ್ಲಿ ಮತ್ತು ಜೀವನದ ಇತರ ಪದ್ಧತಿಗಳಲ್ಲಿ ನಮ್ಮನ್ನು ಅದು ಡಾಂಭಿಕತೆ ಮತ್ತು ಪ್ರತ್ಯೇಕತೆಗೆ ಈಡು ಮಾಡಿತು. ಅನ್ಯರೊಡನೆ ಮಾಡುವ ನಮ್ಮ ವ್ಯವಹಾರವು ನಾವು ಹೇಳಿಕೊಳ್ಳುವ ಉಚ್ಚ ಸಂಸ್ಕೃತಿಗೆ ವಿಚಿತ್ರವಾಗಿ ವಿರುದ್ಧವಿದೆ. ಎಲ್ಲ ನೀತಿಸಂಸ್ಕಾರಕ್ಕೂ ಅದು ಅಸಹ್ಯವೆನಿಸುವಂಥದೂ ಮಾನವ್ಯಗೌರವವನ್ನು ಅತ್ಯಂತ ಅಧೋಗತಿಗಿಳಿಸುವಂಥದೂ ಆಗಿದೆ. ದುರ್ಭಾಗ್ಯವಶಾತ್, ನೂರಾರು ವರ್ಷಗಳಿಂದ ಅದು ಎಡೆಬಿಡದೆ ನಡೆದುಕೊಂಡು ಬಂದುದರಿಂದ ಅದು ಸ್ವಾಭಾವಿಕವೆಂದೂ ದೇವನಿರ್ಮಿತವೆಂದೂ ಸರ್ವರಿಗೂ ಅನಿವಾರ್ಯವಾಗಿ ಅನ್ವಯಿಸುವದೆಂದೂ ತಿಳಿಯಲಾಗಿದೆ.

ಅಸ್ಪೃಶ್ಯತೆಯ ವಿರುದ್ಧ ಗಾಂಧೀಜಿ ಅವಿಶ್ರಾಂತ ಹೋರಾಟವನ್ನು ನಮ್ಮಲ್ಲಿ ೩೦ ವರ್ಷಗಳತನಕ ಸಾಗಿಸಿದರು. ಅಸ್ಪೃಶ್ಯತೆಯು ಕೇವಲ ಹಿಂದುಗಳ ಅತಿ ಹೆಚ್ಚಿನ ಪ್ರತ್ಯೇಕತೆ ಮತ್ತು ಶ್ರೇಷ್ಠೋಹಂಬುದ್ಧಿ ಇವುಗಳ ಒಂದು ಮಾದರಿ. ಹೆಚ್ಚು ಕಡಿಮೆ ವಿಷಾರ್ತ ರೂಪದಲ್ಲಿ ಈ ರೋಗವು ಇಡೀ ಹಿಂದು ಸಮಾಜವನ್ನು ವ್ಯಾಪಿಸಿದೆ. ಗಾಂಧೀಜಿ ಅಸ್ಪೃಶ್ಯತೆಯ ವಿರುದ್ಧ ಕತ್ತಿ ಹಿಡಿದು ಕಾಳಗ ಹೂಡಿ ಅದರ ಬುನಾದಿಯನ್ನೇ ಬುಡಮೇಲು ಮಾಡಲಿಚ್ಛಿಸಿ ತಮ್ಮನ್ನೇ ತಾವು ಹರಿಜನ ಎಂದು ಕರೆದುಕೊಂಡು ಸ್ವಯಂ ಪ್ರೇರಣೆಯಿಂದ ಭಂಗಿಯ ಸ್ಥಾನವನ್ನು ಸ್ವೀಕರಿಸಿದರು. ಈ ಪ್ರಕಾರ ಅವರು ಸವರ್ಣರೆನಿಸಿಕೊಳ್ಳುವ ಹಿಂದುಗಳ ಶ್ರೇಷ್ಠೋಹಂಬುದ್ಧಿಗೆ ಬಲವಾದ ಏಟನ್ನು ಕೊಟ್ಟು ಅತ್ಯಧಮರ ಸ್ಥಾನವನ್ನೂ ಬೆಳವಣಿಗೆಯ ನಿಲುವನ್ನೂ ಉಚ್ಚ ಮಟ್ಟಕ್ಕೇರಿಸಿದರು. ಯಾವ ರೂಪದಲ್ಲಿದ್ದರೂ ವರ್ಣವೆಂಬುದನ್ನು ಹಿಂದುಗಳೊಳಗಿಂದ ತೆಗೆದು ಹಾಕಲು ಧರ್ಮಯುದ್ಧವನ್ನು ಹೂಡಬೇಕಾದ್ದು ಬಹಳ ದಿನದಿಂದ ಮಾಡದೆ ಉಳಿದ ಕಾರ್ಯ.

ದೊಡ್ಡ ದೊಡ್ಡ ನಗರಗಳಲ್ಲಿ ಮತ್ತು ಪಟ್ಟಣಗಳಲ್ಲಿ ಜಾತಿಭೇದಗಳನ್ನು ಅನುಸರಿಸುವದಕ್ಕಿಂತ ಹೆಚ್ಚಾಗಿ ಬಿಟ್ಟಲ್ಲೇ ಹೆಚ್ಚು ಗೌರವದಿಂದ ಕಾಣುವುದು ರೂಢಿಗೆ ಬಂದಂತಿದೆ. ಹಿಂದೆ ಮುಂದೆ ನೋಡದೆ ಸಾರ್ವಜನಿಕ ಸಮಾರಂಭಗಳಲ್ಲಿ, ಹೊಟೇಲು ಮುಂತಾದ ಉಪಹಾರ ಮಂದಿರಗಳಲ್ಲಿ ಮಿಶ್ರಪಂಕ್ತಿಗಳಲ್ಲಿ ಕುಳಿತು ಅಭಕ್ಷ್ಯ ಅಪೇಯಗಳ ಸಹಿತವಾಗಿ ಎಲ್ಲವನ್ನೂ ಇಂದು ಪ್ರಕಟವಾಗಿ ಸವರ್ಣ ಹಿಂದುಗಳು ತಿನ್ನುವುದು, ಕುಡಿಯುವುದು ಕಂಡುಬರುತ್ತದೆ, ವಿಧವಾ ವಿವಾಹ, ಅಂತರ್ವರ್ಣೀಯ ಮತ್ತು ಅಂತರೂಪ ಜಾತೀಯ ವಿವಾಹಗಳು ಬೇಕಾದಷ್ಟು ನಡೆಯತೊಡಗಿವೆ. ಆದರೆ ಈ ಬದಲಾವಣೆಯು ನಗರಸ್ಥ ಜನರಲ್ಲೂ ಅತಿ ಸ್ವಲ್ಪ ಜನದಲ್ಲಿ ಬಳಕೆಗೆ ಬಂದಿದೆ; ಹಳ್ಳಿಗಳಲ್ಲಿರುವ ಜಾತಿಗಳ ಬಹ್ವಂಶವು ಇದರಿಂದ ಯಾವ ಸುಧಾರಣೆಯನ್ನು ಹೊಂದದೆ ಯಥಾಸ್ಥಿತಿಯಲ್ಲಿ ಉಳಿದಿದೆ.

ನಗರವಾಸಿಗಳ ಸುಧಾರಣಾನಟನೆ ಕೂಡ ಕೇವಲ ಹಾರಿಕೆಯದಾಗಿದೆ. ಹೊರಗೆ ಸನಾತನ ನಿಯಮಗಳನ್ನು, ಸ್ವೇಚ್ಛಾವಿಹಾರ, ಸ್ವಸುಖ ಮತ್ತು ಸಾರ್ವಜನಿಕ ಸಮಾರಂಭ ಇವುಗಳಲ್ಲಿ ಎಲ್ಲರ ಲಕ್ಷ್ಯವನ್ನು ಸೆಳೆಯುವದರ ಸಲುವಾಗಿ ಉಲ್ಲಂಘಿಸಿ ದಂಡನೆಗೊಳಗಾಗದೆ ಜಾರಿಕೊಳ್ಳುತ್ತಾರೆ. ಅಥವಾ ಔಷಧದ ಹೆಸರಿನಲ್ಲಿ ಅವರು ಅಭಕ್ಷ್ಯ ಅಪೇಯಗಳನ್ನೂ ಸೇವಿಸುವರು. ಆದರೆ ತಮ್ಮ ಸಮಾಜದ ನಡುವೆ ತಮ್ಮ ಹಳ್ಳಿಗಳಲ್ಲಿ ಅವರಿಗೆ ಹಾಗೆ ಮಾಡುವ ಧೈರ್ಯವಿಲ್ಲ; ಅಥವಾ ಒಂದು ಸಾರ್ವಜನಿಕ ಸಮಾರಾಧನೆಯಲ್ಲಿ ಹರಿಜನನೊಡನೆ ಅವರು ಉಣ್ಣಬಹುದು, ಆದರೆ ಬ್ರಾಹ್ಮಣೇತರ ಇಲ್ಲವೆ ಹರಿಜನ ಅಡಿಗೆಯವನನ್ನು ಅವರು ಮನೆಯಲ್ಲಿಟ್ಟುಕೊಳ್ಳಲು ಧೈರ್ಯಪಡರು. ಹೀಗೆ ಅವರ ಆಧುನಿಕ ವರ್ತನೆಯು ಮೇಲೆ ಮೇಲಿನದೂ ತೋರಿಕೆಯದೂ ಆಗಿದೆ. ಅದು ಸುಧಾರಣೆಯಲ್ಲ, ಸ್ವೇಚ್ಛಾಚಾರ; ಅದಕ್ಕೆ ನೈತಿಕ ಬೆಲೆಯಿಲ್ಲ.

ಇತ್ತೀಚೆಗೆ ಅಮೇರಿಕದಲ್ಲಿ ಒಂದು ಚಳವಳ ಹೊರಟಿದೆ. ಅದರಲ್ಲಿ ಕೆಲವು ಉದಾತ್ತಾತ್ಮರಾದ ಅಮೇರಿಕನ್ನರು ನಿಗ್ರೋ ಮತ್ತು ಇತರ ಶ್ವೇತೇತರರನ್ನು ಸ್ವಯಂಪ್ರೇರಣೆಯಿಂದ ತ್ಯಜಿಸಿ ಶ್ವೇತೇತರತ್ವವನ್ನು ಪರಿಗ್ರಹಿಸಿ ಆ ಪ್ರಕಾರ ಒಂದು ಗಂಭೀರ ಘೋಷಣೆಯನ್ನು ಸರಕಾರೀ ರಿಜಿಸ್ಟ್ರಾರನೆದುರು ಮಾಡಿ ಆ ಸ್ಥಾನಕ್ಕಿರುವ ಅವಮಾನ ಅನರ್ಹತೆಗಳನ್ನು ಸ್ವೀಕರಿಸುತ್ತಾರೆ. ವಿಚಾರವಂತರು ಇಂಥ ಯಾವುದಾದರೊಂದು ಉಪಾಯವನ್ನು ಜಾತೀಯತೆಯನ್ನು ಹೊಡೆದೋಡಿಸಲು ಕೈಕೊಳ್ಳಬೇಕು. ಇಲ್ಲಿ ಕೆಲವು ಕೆಲಸಕ್ಕೆ ಬರುವ ಸಲಹೆಗಳಿವೆ.

— ೧೦ ನೇ ಪುಟಕ್ಕೆ

# ಮೈಸೂರು ಟಿಪ್ಪಣಿಗಳು ೧

## ೧ ಆದರ್ಶ ದಾನ

ಕಳೆದ ಮೇ ತಿಂಗಳಲ್ಲಿ ಕಸ್ತೂರಬಾ ನಿಧಿಯ ಮತ್ತು ಹರಿಜನ ಕಾರ್ಯಕ್ಕಾಗಿ ಮೈಸೂರು ಸಂಸ್ಥಾನದ ಉತ್ತರ ಭಾಗದಲ್ಲಿ ಸಂಚರಿಸುವಾಗ ಗೆಳೆಯರಿಬ್ಬರ ಆದರ್ಶ ದಾನದ ಪ್ರಸಂಗವನ್ನು ಕಾಣುವ ಸುಸಂಧಿ ನನಗೆ ಒದಗಿತು. ಅವರು ಶ್ರೀಮಂತರೆಂದಾಗಲಿ ಸಂಪತ್ತುಳ್ಳವರೆಂದಾಗಲಿ ಖ್ಯಾತಿಹೊಂದಿದವರಲ್ಲ. ಪಶ್ಚಿಮ ಘಟ್ಟದ ಅರಣ್ಯವೊಂದರಲ್ಲಿ ಹದಿನಾಲ್ಕು ಹರಿಜನ ಕುಟುಂಬಗಳಿಗಾಗಿ ಹುಂಚಿನ ಹಂಚಿನ ಪಕ್ಕಾ ಮನೆಗಳನ್ನು ಅವರು ಕಟ್ಟಿಸಿಕೊಟ್ಟಿರುವರು. ಈ ಚಾಳಿನಲ್ಲಿ ೧೪ ಹರಿಜನ ಕೂಲಿಕಾರರಿಗಾಗಿ ಮನೆಗಳಿವೆ. ಅವರಿಗಾಗಿ ಒಂದು ಭಜನಮಂದಿರವಿದೆ, ಕುಡಿಯುವ ನೀರಿನ ಬಾವಿಯೊಂದಿದೆ ಮತ್ತು ಕವಲು ದಾರಿಯೊಂದಿದೆ. ಇದಕ್ಕೆಲ್ಲ ಒಟ್ಟು ೩೨ ಸಾವಿರ ರೂಪಾಯಿ ವೆಚ್ಚ ಹಿಡಿದಿದೆ. ಈ ವೆಚ್ಚದಲ್ಲಿ ಮೈಸೂರು ಸರಕಾರದವರು ೮೦೦೦ ರೂಪಾಯಿಗಳ ಕಾಣಿಕೆ ಕೊಟ್ಟಿದ್ದು ಉಳಿದುದನ್ನೆಲ್ಲ ಶಿವಮೊಗ್ಗ ಜಿಲ್ಹೆಯ ಅಗುಂಬೆಹಳ್ಳಿಯ ಶ್ರೀ ಕೃಷ್ಣಯ್ಯಶೆಟ್ಟಿ ಮತ್ತು ಅವರ ಪಾಲುಗಾರರು ಕೊಟ್ಟಿರುವರು. ೧೯೪೭ ನೇ ಇಸ್ವಿಯ ಮೇ ೧೯ ಕ್ಕೆ ಮೈಸೂರಿನ ಹಿಂದಿನ ಮಂತ್ರಿಗಳಾಗಿದ್ದ ದಿವಂಗತ ಡಾ. ಟಿ. ಸಿ. ಎಂ. ರಾಯನ್ ಇವರು ಈ ಚಾಳಿನ ಪ್ರಾರಂಭೋತ್ಸವವನ್ನು ಜರುಗಿಸಿದ್ದರು. ಇಂಥ ಅತ್ಯುತ್ತಮ ಮನೆಗಳಲ್ಲಿ ವಾಸಿಸುತಿರುವ ಹರಿಜನರು ಅವರ ತಾತ್ಪೂರ್ತಿಕ ಇಲ್ಲವೆ ಖಾಯಂ ಕೆಲಸಗಾರರಲ್ಲೆಂಬುದು ಈ ಸಂಗತಿಯ ಮಹತ್ವವನ್ನೇನೂ ಕಡಮೆ ಮಾಡುವದಿಲ್ಲ. ಮೈಸೂರು ಸಂಸ್ಥಾನದ ಗುಡ್ಡಗಾಡು ಪ್ರದೇಶದಲ್ಲಿ ವಿಪುಲ ಕಾಫೀ ಮತ್ತು ಚಹಾ ತೋಟಗಳಿರುವ ಬಂಡವಲುಗಾರರಲ್ಲಿ ಬಹಳ ಕಡಮೆ ಜನರು ಇಂಥ ಅತ್ಯುತ್ತಮ ಮನೆಗಳನ್ನು ತಮ್ಮ ನವಕರರಿಗಾಗಿ ಒದಗಿಸಿರುವರು; ಅಲ್ಲದೆ ದಕ್ಷಿಣ ಕನ್ನಡ ಜಿಲ್ಹೆಯಿಂದ ಕರೆದುತಂದ ಕೂಲಿಕಾರರನ್ನು ಅಲ್ಲಿ ಬಹಳಮಟ್ಟಿಗೆ ಶೋಷಿಸಲಾಗುತಿದೆಂದೂ ಸುದ್ದಿ.

## ೨ ಸಾನಂದಾಶ್ಚರ್ಯ

ಹಾಸನ ಜಿಲ್ಹೆಯ (ಮೈಸೂರು ಸಂಸ್ಥಾನ) ಕಾಂತರಾಜಪುರ ಹಳ್ಳಿಯಲ್ಲಿಯ ಕಸ್ತೂರಬಾ ಹಳ್ಳಿಕೇಂದ್ರಕ್ಕೆ ನನ್ನನ್ನು ಕರೆದುಕೊಂಡು ಹೋಗಲಾಗಿತ್ತು, ಅಲ್ಲಿ ಇಪ್ಪತ್ತು ಹರಿಜನ ಕುಟುಂಬಗಳು ಆ ಹಳ್ಳಿಯ ವ್ಯಾಪಾರಸ್ಥರು ಒದಗಿಸಿದ ತಾಮ್ರದ ತಗಡುಗಳಲ್ಲಿ ಕೆಲಸ ಮಾಡುತಿದ್ದುದನ್ನು ನಾನು ನೋಡಿದೆ. ತಮ್ಮ ಮನೆಗಳಲ್ಲಿ ಅವರೀ ಕೆಲಸ ಮಾಡುತಿರುವದನ್ನು ಅವರು ಉಪಯೋಗಿಸುತಿದ್ದ ಉಪಕರಣಗಳನ್ನೂ ನಾನು ನೋಡಿದೆನು. ವರ್ಷದಲ್ಲಿ ಸುಮಾರು ಆರು ತಿಂಗಳು ಅವರಲ್ಲಿ ಪ್ರತಿ ಕುಟುಂಬದವರು ದಿನಕ್ಕೆ ೧ ರಿಂದ ೪ ರೂಪಾಯಿಗಳ ವರೆಗೆ ಗಳಿಸುತಿರುವರೆಂದೂ ನನಗೆ ಹೇಳಲಾಯಿತು. ಯುದ್ಧ ಕಾಲದಲ್ಲಿ ತಾಮ್ರದ ತಗಡುಗಳು ಸಿಕ್ಕುತಿರಲಿಲ್ಲ. ಆದುದರಿಂದ ಅವರು ಉಪವಾಸ ಬಿದ್ದಂತೆ ಆಗಿತ್ತು. ಸುದೈವದಿಂದ ಇಂದು ಅವರಿಗೆ ಕಚ್ಚಾ ಸರಕು ಸಿಕ್ಕುತಿದೆ. ಆದರಿಂದ ಅವರು ತಮ್ಮ ಜೀವನವನ್ನು ತಾವೇ ಸಾಗಿಸಬಲ್ಲರು; ಅಲ್ಲದೆ ಹೆಚ್ಚು ಹಣವನ್ನೂ ಗಳಿಸಬಲ್ಲರು.

ಗಢವಾಲ ಜಿಲ್ಹೆಯಲ್ಲಿಯ ಬಡಿಗರು, ಶಿಂಪಿಗರು, ಕಮ್ಮಾರರು ಮತ್ತು ಉಳಿದ ಕಲಾಕೈಗಾರಿಕೆ ಕುಶಲರನ್ನು 'ಡೋಮ' (ಚಂಡಾಲರೆಂದರ್ಥ) ಎಂಬ ಸಾಮಾನ್ಯಶಬ್ದದಿಂದ ಕರೆಯಲಾಗುತಿತ್ತು. ಆದರಿಂದ ಲಾಲಾ ಲಜಪತರಾಯರ ಪ್ರಯತ್ನದ ಫಲವಾಗಿ ಅವರನ್ನು ಶಿಲ್ಪಕಾರರು ಕಲಾಕುಶಲರು ಎಂಬ ಗೌರವದ ಹೆಸರಿನಿಂದ ಕರೆಯಲಾಗುತಿದೆ. ಇಲ್ಲಿನ ವ್ಯಾಪಾರಸ್ಥರು ಹರಿಜನರನ್ನು ಕಲಾಕುಶಲರನ್ನಾಗಿ ಪರಿವರ್ತಿಸಿದ್ದಾರೆ. ಅವರಿಗೂ ಧನ್ಯವಾದಗಳು.

## ೩. ಸುಧಾರಿಸಿದ ಹಳ್ಳಿ

೧೯೪೭ನೇ ಇಸ್ವಿಯ ಮೇ ೨೦ಕ್ಕೆ ಮೈಸೂರು ಸಂಸ್ಥಾನದಲ್ಲಿಯ ಕಸ್ತೂರಬಾ ನಿಧಿ ಕೇಂದ್ರದ ಎರಡನೆ ಹಳ್ಳಿಯನ್ನು ನಾನು ಸಂದರ್ಶಿಸಿದೆ. ಅದರಲ್ಲೊಂದು ಹಾಸನ ಜಿಲ್ಹೆಯ ಶಾಲೆ ಹಳ್ಳಿಯಲ್ಲಿ ಇದೆ. ಈ ಕೇಂದ್ರವು ೨॥ ವರ್ಷಗಳಿಂದ ನಡೆಯುತಿದೆ; ಕಾರ್ಯದರ್ಶಿಗಳಾದ ಶ್ರೀ ತಿಮ್ಮಪ್ಪಗೌಡ ಇವರು ಅಲ್ಲಿ ಮಾಡಿದ ಕಾರ್ಯದ ವರದಿಯನ್ನು ಕೆಳಗೆ ಕೊಟ್ಟದ್ದು ವಾಚನೀಯವಾಗಿದೆ.

ಸುಮಾರು ಇಪ್ಪತ್ತು ವರುಷಗಳ ಹಿಂದೆ ಈ ಹಳ್ಳಿಯು ಭಯಂಕರ ಕುಡುಕರಿಂದ ಮತ್ತು ಜೇಬಾಜಿಗಳಿಂದ ತುಂಬಿದ್ದಿತು. ಈ ಹಳ್ಳಿಯಲ್ಲಿ ಕೈಗೆ ಕೈ ಹತ್ತಿ ಜಗಳವಾಗದೆ ಒಂದು ದಿನವೂ ಕಳೆಯುತಿರಲಿಲ್ಲ. ಸಮೃದ್ಧ ಬೆಳೆ ಬರುವದೆಂಬ ನಂಬಿಕೆಯಿಂದ ಅವರು ನೂರಾರು ಕೋಣ ಕಡಿದು ಮಾರಿ ಪೂಜೆ ಮಾಡುತಿದ್ದರು. ೧೯೪೧ ರಲ್ಲಿ ಶ್ರೀ ತಿಮ್ಮಪ್ಪಗೌಡರು ತಮ್ಮ ಶಿಕ್ಷಣವನ್ನು ಮುಗಿಸಿಕೊಂಡು ಈ ಹಳ್ಳಿಯಲ್ಲಿ ಇರಹತ್ತಿದರು ಮತ್ತು ಈ ಕೆಟ್ಟ ಚಟಗಳನ್ನು ಬಿಟ್ಟುಗೊಡಲು ಜನರು ಮನವೊಲಿಸಹಹತ್ತಿದರು. ಅವರ ತಂದೆಯು ಆ ಹಳ್ಳಿಯ ಪಟೇಲರಾಗಿದ್ದುದರಿಂದ ಅವನ ಮಾತಿಗೆ ಮನ್ನಣೆ ಸಿಕ್ಕಹತ್ತಿ ತರುಣರೆಲ್ಲ ಅವರ ಸುತ್ತು ನೆರೆಯಹತ್ತಿದರು. ಕುಡಿಯುವದಿಲ್ಲೆಂಬ ಪ್ರತಿಜ್ಞೆಯನ್ನು ಅವರು ತೆಗೆದುಕೊಂಡರು. ೧೯೪೩ ರಲ್ಲಿ ಐದು ವರುಷಗಳ ಹಿಂದೆ ಸಹಕಾರ ಸಂಘವು ಸ್ಥಾಪಿಸಲ್ಪಟ್ಟಿತು. ಬಟ್ಟೆ ಸೀಮೆಎಣ್ಣೆ ಮತ್ತು ಒಕ್ಕಲತನದ ಉಪಕರಣಗಳು ಯುದ್ಧದ ಕಠಿನ ದಿನಗಳಲ್ಲಿ ಈ ಸಂಘದ ಮುಖಾಂತರ ಒದಗಿಸಲಾಗುತಿದ್ದವು. ವರ್ಷಕ್ಕೊಮ್ಮೆ ಕೋಣಗಳನ್ನು ಕಡಿಯುತಿದ್ದ ಹಿರಿಯರ ಮನಸ್ಸನ್ನು ಅದರಿಂದ ಪರಾವೃತ್ತ ಮಾಡುವಲ್ಲಿ ತಿಮ್ಮಪ್ಪನವರು ಸಮರ್ಥರಾದರು. ಹಳ್ಳಿಯಲ್ಲಿ ಅವರೊಬ್ಬರೇ ಸುಶಿಕ್ಷಿತ ಮನುಷ್ಯರಾಗಿದ್ದರಿಂದ ಹಿರಿಯರು ಅವರನ್ನು ಒಂದು ಬಗೆಯ ಭಯಭೀತಿಯಿಂದ ನೋಡಿಕೊಳ್ಳುತಿದ್ದರು. ತಿಮ್ಮಪ್ಪನವರು ಇದರ ಲಾಭಪಡೆದು ಕುಡಿಯುವದನ್ನು ಪೂರ್ಣವಾಗಿ ಬಿಟ್ಟುಗೊಡಲು ಅವರನ್ನು ಒತ್ತಾಯಪಡಿಸಹತ್ತಿದರು. ಮತ್ತು ಹಳ್ಳಿಯ ಸುಧಾರಣಕಾರ್ಯವನ್ನು ಕೈಕೊಳ್ಳಲು ಒತ್ತಾಯಪಡಿಸಿ ಬಹಳಮಟ್ಟಿಗೆ ಅದರಲ್ಲಿ ಯಶಸ್ವಿಯಾದರು.

೧೯೪೫ ನೇ ಸಪ್ಟಂಬರದಲ್ಲಿ ಶ್ರೀಮತಿ ಯಶೋಧರಾ ದಾಸಪ್ಪ ಇವರು ಆ ಹಳ್ಳಿಗೆ ಗ್ರಾಮಸೇವಾ ಕೇಂದ್ರವನ್ನು ಸಂಸ್ಥಾಪಿಸಲು ಮಂಜೂರು ಮಾಡಿದರು. ಗ್ರಾಮಸೇವಿಕೆಯರು ಹಳ್ಳಿಯ ಸುಧಾರಣೆಯ ಕಾರ್ಯವನ್ನು ಪ್ರಾರಂಭಿಸಿ ಬಹಳ ಪ್ರಶಂಸನೀಯ ಕಾರ್ಯವನ್ನು ಮಾಡಿರುವರು. ಮನೆಗಳ ಹೊರಗೋಡೆಗಳ ಮೇಲೆ ಕುಳ್ಳು ಹಚ್ಚುವ ರೂಢಿಯಿಂದ ಹಳ್ಳಿಗರನ್ನು ಪರಾವೃತ್ತ ಮಾಡಿದರು. ಕಲ್ಲು ಮೊದಲಾದವುಗಳಿಂದ ತುಂಬಿದ ಅನೇಕ ತಗ್ಗುಗಳನ್ನು ವಶಪಡಿಸಿಕೊಂಡು ಅವರು ಬದಿಗಳಲ್ಲಿ ಗಟಾರಗಳನ್ನು ಕಡಿಸಿದರು. ಒಂದು ಬಾವಿಯನ್ನೂ ಕಡಿಸಿ ಸೇತುವೆಯೊಂದನ್ನು ರಚಿಸಿಕೊಂಡರು. ವೆಚ್ಚದ ಅಂದಾಜು ಸುಮಾರು ೪೦೦೦ ರೂಪಾಯಿ. ಈ ಹಳ್ಳಿಯ ಹೆಣ್ಣುಮಕ್ಕಳಿಗೆ ಅನವಶ್ಯಕ ಲಜ್ಜೆಯನ್ನು ಬಿಟ್ಟು ಸುಶಿಕ್ಷಿತ ಹೆಣ್ಣುಮಕ್ಕಳ ಕೂಡ ಸಮಾನತೆಯಿಂದ ಅನಿರ್ಬಂಧವಾಗಿ ಕೂಡಿಕೊಳ್ಳಲು ಅವರು ಬೋಧಿಸಿದರು; ಮನೆಗಳನ್ನು ಮತ್ತು ಸುತ್ತಲಿನ ಸ್ಥಳಗಳನ್ನು ಸ್ವಚ್ಛವಿಡಲು ಉಪದೇಶಿಸಿದರು. ಹೆಣ್ಣುಮಕ್ಕಳಿಗಾಗಿ ಅವರು ಪ್ರೌಢ ವರ್ಗಗಳನ್ನು ತೆರೆದರು. ಈಗ ಸುಮಾರು ೨೦ ಹೆಣ್ಣುಮಕ್ಕಳು ಚೆನ್ನಾಗಿ ಓದಬಲ್ಲರು. ವೈದ್ಯಕೀಯ ಪರಿಹಾರ ಕಾರ್ಯವನ್ನು ಮಾಡಬಲ್ಲರು ಮತ್ತು ಮಕ್ಕಳ ಕೂಟವನ್ನು ರಚಿಸಿಕೊಂಡು ಪ್ರತಿದಿನ ಸುಮಾರು ೭೦ ಚಿಕ್ಕಮಕ್ಕಳಿಗೆ ಮಧ್ಯಾನ್ಹದ ಊಟವನ್ನು ಕೊಡುವದನ್ನೂ ಮಾಡುತಿರುವರು. ಈ ೬೦ ಮಕ್ಕಳಲ್ಲಿ ಅರ್ಧಕ್ಕಿಂತ ಹೆಚ್ಚು ಹೆಣ್ಣುಹುಡುಗಿಯರಿರುವರು. ಇದಕ್ಕಾಗಿ ಹಳ್ಳಿಗರು ೧೨೦೦ ಸೇರು ಭತ್ತವನ್ನು ಕೊಡುತಿರುವರು. ಗ್ರಾಮಸುಧಾರಣ ಕಾರ್ಯದಲ್ಲಿ ಗ್ರಾಮ ಸೇವಿಕೆಯರಿಗೆ ಸಹಾಯ ಮಾಡಲು ಶ್ರೀ. ತಿಮ್ಮಪ್ಪನವರು ಸುಭಾಷ ಸೇನೆಯನ್ನು ಸಂಸ್ಥಾಪಿಸಿರುವರು. ಗ್ರಾಮಮಂದಿರಗಳಲ್ಲಿ ಹರಿಜನರಿಗೆ ಪ್ರವೇಶ ಕೊಡುವ ಬಗ್ಗೆ ಜನರ ಮನವೊಲಿಸುವಲ್ಲಿ ಅವರು ಈ ಗ್ರಾಮಸೇವಿಕೆಯರ ಸಹಾಯವನ್ನು ಪಡೆಯುವುದರಲ್ಲಿ ಯಶಸ್ವಿಯಾದರು. ಕಳೆದ ಮಾರ್ಚ ತಿಂಗಳಲ್ಲಿ ಮಂತ್ರಿವರ್ಯ ಶ್ರೀ. ಕೆ. ಟಿ. ಭಾಷ್ಯಂ ಇವರು ಹರಿಜನರನ್ನು ಮಂದಿರದಲ್ಲಿ ಪ್ರವೇಶ ಮಾಡಿಸಿದರು. ಗ್ರಾಮಸೇವಾ ಕಟ್ಟಡಕ್ಕಾಗಿ ಹಳ್ಳಿಗರು ೧೦೦೦ ರೂಪಾಯಿ ಕೊಟ್ಟಿರುವರು. ಶ್ರೀ ಮಾಗಪ್ಪಗೌಡರು ಕಟ್ಟಡಕ್ಕಾಗಿ ಭೂಮಿಯನ್ನು ಕೊಟ್ಟಿರುವರು. ಬಗೆ ಬಗೆಯ ಗ್ರಾಮಸುಧಾರಣ ಕಾರ್ಯಕ್ಕಾಗಿ ಸರಕಾರದವರು ಸುಮಾರು ಹತ್ತು ಸಾವಿರ ರೂಪಾಯಿಗಳನ್ನು ಮಂಜೂರು ಮಾಡಿರುವರು.

ಈ ಭಾಗಗಳಲ್ಲಿ ರಾಗಿ ಮತ್ತು ಭತ್ತ ಮಾತ್ರ ಬೆಳೆಯುತಿವೆ. ಯಾವ ವ್ಯಾಪಾರೀ ಬೆಳೆಗಳೂ ಬೆಳೆಯುವುದಿಲ್ಲ. ಧೋರಣದ ದೃಷ್ಟಿಯಿಂದ ಸ್ವೀಕರಿಸಿದ ಈ ಹೆಜ್ಜೆಯು ಜಾಣತನದ್ದಾಗಿದೆಂದು ಹೇಳಬಹುದಾದರೂ ಯುದ್ಧ ಕಾಲದಲ್ಲಿ ಕೂಡ ಹಳ್ಳಿಗರು ಹೆಚ್ಚು ಹಣ ಗಳಿಸುವಲ್ಲಿ ಸಮರ್ಥರಾಗಲಿಲ್ಲ. ತತ್ಪರಿಣಾಮವಾಗಿ ಇಂದಿಗೂ ಅವರು ಬಡವರಾಗಿಯೇ ಉಳಿದಿರುವರು. ಬಗೆ ಬಗೆಯ ಕಾರ್ಯಕ್ರಮವನ್ನು ಕೈಕೊಳ್ಳಲು ಈ ಕೇಂದ್ರಕ್ಕೆ ಹಣದ ಅವಶ್ಯಕತೆ ಇದೆ.

(ಹರಿಜನ) —ಎ. ವಿ. ಠಕ್ಕರ

## ಜಾತಿನಿರ್ಮೂಲನ ಮಾಡುವುದು ಹೇಗೆ?

(೯ ನೇ ಪುಟದಿಂದ)

(೧) ಭೇದಬುದ್ಧಿ ಅದಕ್ಕಿರುವ ವಿಶಿಷ್ಟ ಮತ್ತು ಹಕ್ಕುಗಳೊಡನೆ ಜಾತಿಯೆಂಬುದನ್ನು ಒಂದು ಗಂಭೀರ ಸಾರ್ವಜನಿಕ ಘೋಷಣೆ ಮಾಡಿ ಬಿಟ್ಟುಬಿಡಬೇಕು. ಈ ಕೆಲಸಕ್ಕಾಗಿ ಸರಕಾರವೊಬ್ಬ ಅಧಿಕಾರಿಯನ್ನು ನಿಯಮಿಸಿದರೆ ಅವನೆದುರು ಅದನ್ನು ಮಾಡಬಹುದು; ಅಲ್ಲದಿದ್ದರೆ, ಈ ಸುಧಾರಣೆಗಾಗಿ ಸ್ಥಾಪಿತವಾದ ಕಾರ್ಯಾಲಯದಲ್ಲಿ ಜಾತಿ ಉಪಜಾತಿಗಳ ಮುಖಂಡನಿದಿರು ಮಾಡಬಹುದು. ಪತ್ರಿಕೆಗಳಲ್ಲಿ ಪ್ರಕಟಿಸಬಹುದು.

(೨) ಮಿಶ್ರಭೋಜನ ಸಮಾರಂಭಗಳನ್ನೇರ್ಪಡಿಸಬೇಕು. ಅಲ್ಲಿ ಹಿಂದು, ಹರಿಜನ, ಮುಸಲ್ಮಾನ, ಪಾರಸಿ ಮುಂತಾದ ಜಾತಿಯವರು ಒಟ್ಟಿಗೆ ಸರಳವಾದ ಶಾಕಾಹಾರವನ್ನು ಉಣ್ಣಬೇಕು. ಅನಂತರ ತಮ್ಮ ಹೆಸರು ಮತ್ತು ವಿಳಾಸಗಳನ್ನು ಫೋಟೋಸಹಿತ ಪತ್ರಿಕೆಗಳಿಗೂ ಜಾತಿಯ ಮುಖಂಡರಿಗೂ ಕಳುಹಿಕೊಡಬೇಕು.

(೩) ಅಂತರ್ಜಾತೀಯ ವಿವಾಹವನ್ನು ಇಚ್ಛಾಪೂರ್ವಕ ಪ್ರೋತ್ಸಾಹಿಸಬೇಕು.

(೪) ಜಾತೀಯ ಸಮ್ಮೇಲನಗಳಿಗೆ ಹೋಗದೆ, ಅದಕ್ಕೆ ಕೊಡುವ ಕಾಣಿಕೆಯನ್ನು ಕೊಡದೆ, ಅದರ ಅಪ್ಪಣೆಯನ್ನು ಪಾಲಿಸದೆ ಇದ್ದು ಜಾತಿಗೆ ಮನ್ನಣೆ ಕೊಡುವದನ್ನು ನಿಲ್ಲಿಸಬೇಕು.

(೫) ಸೇವಕನು ಅಗತ್ಯವಿದ್ದಾಗ ಕೆಳಜಾತಿಯವನೆಂದೆನಿಸುವ ಒಬ್ಬನನ್ನು—ಅದರಲ್ಲೂ ಹರಿಜನನಿದ್ದರೆ ಉತ್ತಮ—ಅಡಿಗೆಯವನನ್ನಾಗಿ ಇಲ್ಲವೆ ಗೃಹಕೃತ್ಯದ ಸೇವಕನನ್ನಾಗಿಯಾಗಲಿ ನಿಯಮಿಸಬೇಕು. ಬ್ರಾಹ್ಮಣ ಇಲ್ಲವೆ ಸವರ್ಣ ಹಿಂದುವನ್ನು ನಿಯಮಿಸತಕ್ಕದ್ದಲ್ಲ.

(೬) ಖಾಸಗಿ ಇಲ್ಲವೆ ಸಾರ್ವಜನಿಕ ಸಂಸ್ಥೆಯ ಅರ್ಜಿಯಲ್ಲಿ ಇಲ್ಲವೆ ನ್ಯಾಯಾಲಯಗಳಲ್ಲಿ ಜಾತಿಯ ಹೆಸರು ಹೇಳುವುದಕ್ಕೆ ಸಮ್ಮತಿಸದಿರಬೇಕು. ಎಲ್ಲ ರಿಕಾರ್ಡುಗಳಿಂದಲೂ ಜಾತಿಯನ್ನು ಕೇಳುವ ಕಾಲಮ್ಮನ್ನು ಕಿತ್ತುಹಾಕಲು ಚಳವಳ ಹೂಡಬೇಕು.

(೭) ಉಳಿದ ಜಾತಿಗಳನ್ನು ಬಿಟ್ಟು ಯಾವುದೋ ಒಂದು ಜಾತಿಯ ಅಭಿವೃದ್ಧಿಗಾಗಿ ಜಾತೀಯ ಆದರ್ಶದ ಅಡಿಗಲ್ಲಿನ ಮೇಲೆ ಆಧರಿಸಿ ನಿಂತ ಧಾರ್ಮಿಕ ಇಲ್ಲವೆ ಇತರ ಸಂಸ್ಥೆಗಳಿಂದ ಶಿಷ್ಯವೃತ್ತಿ, ಪದವಿ, ಕೆಲಸ ಅಥವಾ ಇತರ ಪ್ರಯೋಜನಗಳನ್ನು ಬಂದರೆ ತೆಗೆದುಕೊಳ್ಳಬಾರದು. ಯಾವ ರೀತಿಯಿಂದಲೂ ಕರ್ತೃತ್ವದಿಂದ ಅಂಥ ಸಂಸ್ಥೆಗಳೊಡನೆ ಸಂಬಂಧ ಬೆಳೆಸಲು ನಿರಾಕರಿಸಬೇಕು.

(೮) ಧಾರ್ಮಿಕ, ಸಾಮಾಜಿಕ ರಾಜಕೀಯ ಇಲ್ಲವೆ ಆರ್ಥಿಕ ಎನಿಸಿದ ಯಾವ ಸಂಸ್ಥೆಯೇ ಇರಲಿ—ಅದು ವಿಶಿಷ್ಟ ಜಾತಿಯ ಇಲ್ಲವೆ ಉಪಜಾತಿಯ ಹಿತಸಂವರ್ಧನೆ, ರಕ್ಷಣೆ ಇವಕ್ಕಾಗಿ ಮೀಸಲಾಗಿದ್ದರೆ ಅವುಗಳೊಡನೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳಕೂಡದು.

ವಾಹಿ,
೨೦।೫।೪೮ — ಸ್ವಾಮಿ ಆನಂದ
(ಹರಿಜನ)

---

ಜೆಕೋಸ್ಲೋವೇಕಿಯದ ಅಂತರಿಕ ಮಂತ್ರಶಾಖೆಯು ಅಮೇರಿಕನ್ನರು ಗೂಢಚಾರರನ್ನು ಒಳಗೆ ಕಳಿಸಿದ ಆರೋಪವನ್ನು ಅವರ ಮೇಲೆ ಮಾಡಿದೆ.

## ಹರಿಲಾಲ ಗಾಂಧಿ

ಗಾಂಧೀಜಿಯ ಮಕ್ಕಳಾದ ಶ್ರೀ ಹರಿಲಾಲ ಗಾಂಧಿ ಇವರು ತಾ. ೧೯ ರಾತ್ರಿ ಮುಂಬಯಿಯಲ್ಲಿ ಮರಣ ಹೊಂದಿದರು. ಅವರು ಸಾಯುವ ಮೂರು ದಿನ ಮೊದಲು ಯಾರೋ ಅವರ ಅಳಿಯಂದಿರಲ್ಲೊಬ್ಬರಿಗೆ ಅವರು ಮುಂಬಯಿಯ ಯಾವದೋ ಒಂದು ಭಾಗದಲ್ಲಿ ಬಹಳ ರೋಗಗ್ರಸ್ತರಾಗಿದ್ದಾರೆಂದು ಅರುಹಿದರು. ಎರಡು ದಿನಗಳ ನಂತರ ಕ್ಷಯರೋಗದ ಒಂದು ಆಸ್ಪತ್ರಿಯಲ್ಲಿ ಅವರು ಇರುವರೆಂದು ತಿಳಿಯಿತು ಮತ್ತು ಅಂದೇ ರಾತ್ರಿ, ಅವರು ತೀರಿಕೊಂಡರು. ಅವರಿಗೆ ಇಬ್ಬರು ಹೆಣ್ಣುಮಕ್ಕಳು ಒಬ್ಬ ಮಗ ಇದ್ದಾರೆ. ಅವರಿಗೆ ೬೦ ವರ್ಷಗಳಾಗ ಬಂದಿದ್ದವು.

ವರ್ಧಾ
೨೧—೬—೪೮ ಕಿಶೋರಲಾಲ ಮಶ್ರೂವಾಲಾ

---

## ಮತ್ತೆ ಹೈದ್ರಾಬಾದ ವಿಚಾರವೆ?

### ರಾಜಗೋಪಾಲಾಚಾರ್ಯರ ಮಧ್ಯಸ್ಥಿಕೆ

ಹಿಂದುಸ್ತಾನದ ಹೊಸ ಗವರ್ನರ ಜನರಲ್ಲರಾದ ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರ ಮುಖಾಂತರವೇನಾದರೂ ಹೈದರಾಬಾದದ ಬಿಕ್ಕಟ್ಟು ಬಿಡಬಹುದೇನೋ ಎಂದು ರಜಾಕಾರರ ಮುಂದಾಳಾದ ಕಾಶೀಂ ರಜವಿಯವರೂ ಹೈದರಾಬಾದದ ಅಧಿಕಾರಿ ವರ್ಗದವರೂ ನಿರೀಕ್ಷಿಸುತ್ತಿರುವರು. ಇದಕ್ಕೆ ಆಧಾರವಾಗಿ ದಿಲ್ಲಿಯಲ್ಲಿ ನಿಜಾಮರ ಏಜೆಂಟ ಜನರಲರಾಗಿರುವ ನವಾಬ ಜೈನ ಯಾರ ಜಂಗಬಹಾದ್ದೂರರು ವಿಚಾರವಿನಿಮಯಕ್ಕಾಗಿ ಹೈದರಾಬಾದಕ್ಕೆ ಹೋಗಿದ್ದಾರೆಂದೂ ಅಲ್ಲಿ ಕೋಠಿ ಅರಮನೆಯಲ್ಲಿ ನಿಜಾಮರೊಡನೆ ಈ ಬಗ್ಗೆ ಚರ್ಚಿಸಿದರೆಂದೂ ಇದು ಇವರ ಮೂರನೆಯ ಭೆಟ್ಟಿಯೆಂದೂ ವರ್ತಮಾನ ಬಂದಿದೆ. ಈ ಸಂದರ್ಭದಲ್ಲಿ ಹೈದರಾಬಾದದ ಮುಖ್ಯ ಮಂತ್ರಿಗಳಾದ ಮೀರಲಾಯಕ ಅಲ್ಲಿಯವರೂ ಉಪಸ್ಥಿತರಿದ್ದರಾಗಿ ತಿಳಿಯುತ್ತದೆ.

ಈ ಏಜೆಂಟ ಜನರಲ್ಲರು ಭಾರತದ ಹೊಸ ಗವರ್ನರ ಜನರಲ ರಾಜಾಜಿ ಮತ್ತು ಭಾರತದ ಮುಖ್ಯ ಮಂತ್ರಿ ಪಂ. ನೆಹರೂರೊಡನೆ ಇತ್ತೀಚೆಗೆ ನಡೆಸಿದ ಮಾತುಕತೆಗಳನ್ನು ನಿಜಾಮರಿಗೂ ಮೀರಲಾಯಕ ಅಲ್ಲಿಯವರಿಗೂ ತಿಳಿಸಿದ್ದಾರಂತೆ. ಇದನ್ನೆಲ್ಲ ನೋಡಿದರೆ ಹಿಂದುಸ್ತಾನ ಸರಕಾರದೊಡನೆ ಇನ್ನು ೮–೧೦ ದಿನಗಳಲ್ಲಿ ಮತ್ತೆ ಮಾತುಕತೆ ಪ್ರಾರಂಭವಾಗಬಹುದೆಂದು ರಾಜಕಾರಣಿಗಳ ಊಹೆಯಿದೆ.

ಇನ್ನು ಮುಂದೆ ಹೈದರಾಬಾದದೊಡನೆ ಯಾವದೇ ಮಾತುಕತೆಗಳಾಗಲಿ ಪತ್ರವ್ಯವಹಾರವಾಗಲಿ ಸಾಧ್ಯವಿಲ್ಲೆಂದು ಮುಖ್ಯ ಮಂತ್ರಿಗಳಾದ ಪಂ. ನೆಹರು ಅವರು ಖಂಡಿತವಾಗಿ ಹೇಳಿಬಿಟ್ಟಿದ್ದರೂ ಹೊಸ ಗವರ್ನರ ಜನರಲರಾದ ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರು ಈ ಬಗ್ಗೆ ತಾವು ಸ್ವತಃ ಒಂದು ಕೊನೆಯ ಪ್ರಯತ್ನ ಮಾಡಿ ನೋಡಬೇಕೆಂದು ಮಾಡಿದ್ದಾರೆಂದು ತಿಳಿಯುತ್ತದೆ. ಹೈದರಾಬಾದ ಸರಕಾರದ ಪ್ರತಿನಿಧಿಗಳು ಸಾಕಷ್ಟು ಚರ್ಚಿಸಿ ವಿವರಗಳಿಗೆಲ್ಲ ಒಪ್ಪಿಕೊಂಡೇ ಬಿಟ್ಟಿರುವದರಿಂದ ನಿಜಾಮರು ಒಡಂಬಡಿಕೆಯ ಪತ್ರಕ್ಕೆ ಅಂಕಿತಹಾಕುವದು ಮಾತ್ರ ಉಳಿದಿತ್ತು. ಇನ್ನು ಈ ಹೊಸ ಪ್ರಯತ್ನವೆಂದರೆ ತೋರಿಸಿದಲ್ಲಿ ನಿಜಾಮರು ಸಹಿ ಮಾಡಬೇಕೆಂದು ಭಾರತ ಸರಕಾರವು ತಳೆದ ಧೋರಣೆಗಿಂತಲೂ ತುಸು ಸಡಿಲಾದ ಧೋರಣೆಯೆಂದು ರಾಜಕೀಯ ವರ್ಗಗಳ ಅಭಿಪ್ರಾಯವಾಗಿದೆ. ಈ ಹೊಸ ಮಾತುಕತೆಗಳಿಗಾಗಿ ನಿಜಾಮ ಸರಕಾರದ ಪ್ರತಿನಿಧಿಗಳು ಹೊಸದಿಲ್ಲಿಗೆ ಹೊರಡುವ ದಿನಗಳು ಇನ್ನೂ ದೂರವಿದ್ದರೂ ಶ್ರೀ ರಾಜಗೋಪಾಲಾಚಾರ್ಯರು ಈಗಾಗಲೇ ನಿಜಾಮ ಸರಕಾರದೊಡನೆ ಪತ್ರವ್ಯವಹಾರವನ್ನು ಪ್ರಾರಂಭಿರುವರಾಗಿ ತಿಳಿದುಬರುತ್ತದೆ.

---

ಮುಂಬಯಿ ಸರಕಾರದವರು ರಿಕ್ರೂಟಮೆಂಟದ ಎಲ್ಲ ಸರಕಾರಿ ಏಜನ್ಸಿಗಳಿಗೆ, ಈ ಮೊದಲು ಕೆಲಸದಿಂದ ಕಡಮೆ ಮಾಡಲ್ಪಟ್ಟವರಿಗೆ ಪ್ರಾಶಸ್ತ್ಯ ಕೊಡಬೇಕೆಂದು ಅಜ್ಞೆ ಕೊಟ್ಟಿದ್ದಾರೆಂದು ತಿಳಿಯುತ್ತದೆ. ಈ ಅಪ್ಪಣೆ ಕಾರ್ಯರೂಪದಲ್ಲಿ ಬಂದುದನ್ನು ಪರಿಶೀಲಿಸಲು ಒಂದು ಪ್ರತ್ಯೇಕ ಶಾಖೆಯು ಏರ್ಪಡಿಸಲ್ಪಟ್ಟಿದ್ದು ಈಗಾಗಲೇ ಸೀವಾ ಮತ್ತು ಪೂರೈಕೆ ಶಾಖೆಗಳಿಂದ ತೆಗೆದೊಗೆಯಲ್ಪಟ್ಟ ಅನೇಕ ಜನರಿಗೆ ಸೆಕ್ರೆಟರಿಯಟದಲ್ಲಿ ಕೆಲಸ ಕೊಡಲಾಗಿದೆ. ಈ ವರೆಗೆ ತಾತ್ಪೂರ್ತಿಕ ಶಾಖೆಗಳಲ್ಲಿ ಒಟ್ಟು ೧೧೦೦ ಜನರನ್ನು ತೆಗೆದುಕೊಳ್ಳಲಾಗಿದೆ.

# ರೂಪರಂಗ

## ರಸಿಕರಿಗೆ ಬೇಕಾದುದೇನು ?

ಕಲಾದರ್ಶನದಿಂದ ಆಗುವ ಆನಂದಕ್ಕೆ ಪೂರ್ವಭಾವಿಯಾದ ಮನಃಸ್ಥಿತಿಯನ್ನು ಐದು ಭಾಗವಾಗಿ ವಿಭಾಗಿಸಬಹುದು: ಜಗದ ಜಂಜಡದಿಂದ ದೂರ ಸಿಲ್ಲುವ ಬುದ್ಧಿ, ಆಯಾಸ, ತನ್ನ ಸ್ವಭಾವ ಅಥವಾ ಸನ್ನಿವೇಶದಲ್ಲಿಯ ನ್ಯೂನತೆಯ ಜ್ಞಾನ, ಏಕಾಕಿ ಭಾವ, ಸ್ವಾಭಾವಿಕ ಚಾಂಚಲ್ಯಜನ್ಯ ಕುತೂಹಲಬುದ್ಧಿ- ಎಂದು.

ಸಾಮ್ಯವಾದೀ ಆಡಳಿತ ಪದ್ಧತಿಯಿಲ್ಲದ ರಾಜ್ಯದಲ್ಲಿ ಬಡವ ಬಲ್ಲಿದರ ತಾರತಮ್ಯ ಬಹಳ. ಬಡವನು ಮುತ್ತು, ರತ್ನ, ರೇಶಿಮೆ, ಕೇಸರೀಭಾತು ಎಂಬ ಉಡಿಗೆತೊಡಿಗೆ ಉಣಿಸುತಿನಿಸುಗಳನ್ನು ಕನಸಿನಲ್ಲಲ್ಲದೆ, ಕವಿಗಳ ವರ್ಣನೆಯಲ್ಲಲ್ಲದೆ ಬೇರೆ ಕಡೆ ಕಾಣಲು ಶಕ್ಯವಿಲ್ಲ. ಜಗತ್ತು ತುಚ್ಛವೆಂದು ತಿಳಿದಲ್ಲದೆ ಜೀವನದ ಭೋಗ್ಯ ವಸ್ತುಗಳು ಯಾರಿಗೂ ಬೇಡವೆನಿಸಲಾರವು. ಆದರೆ ಅವುಗಳಲ್ಲಿ ಶ್ರೇಷ್ಠವೆನಿಸುವಂಥವೆಲ್ಲವೂ ಆಕಸ್ಮಿಕ ಘಟನೆಗಳಿಂದ, ತಂತ್ರದಿಂದ ಇಲ್ಲವೆ ಹುಟ್ಟಿನಿಂದ ಅತಿ ಶ್ರೀಮಂತರೆನಿಸಿದವರಿಗಲ್ಲದೆ ಉಳಿದವರಿಗೆ ಲಭ್ಯವಿಲ್ಲ. ಕಾವ್ಯ, ನಾಟಕ, ಸಿನೆಮ ಮುಂತಾದವುಗಳಲ್ಲಿ 'ಕನ್ನಡಿಯೊಳಗಿನ ಗಂಟ'ನ್ನು ಕಂಡಷ್ಟು ಆನಂದವನ್ನಾದರೂ ಬಡವನು ಪಡೆಯಬಲ್ಲ ಎಂಬುದು (ದಾಸೋಹಂ ಬುದ್ಧಿಯ) ಕೆಲವರ ಮತ.

ಕೆಲವರಿಗೆ ಜೀವನದ ನಾನಾ ತೊಂದರೆಗಳಿಂದ ಸದಾ ಒಂದು ಬಗೆಯ ಖಿನ್ನತೆಯಿರುತ್ತದೆ. ಸಿನೆಮ ಮುಂತಾದ ವಿನೋದದಿಂದ ಅವರು ಕೆಲವೊಮ್ಮೆಯಾದರೂ ನಕ್ಕು ಆನಂದಿಸಿ ನಿಶ್ಚಿಂತೆಯ ಅಮೃತವನ್ನು ಉಂಡು ತಮ್ಮ ದೇಹ ಮತ್ತು ಮನಸ್ಸುಗಳ ಆರೋಗ್ಯವನ್ನು ಸುಧಾರಿಸಿಕೊಳ್ಳಬಯಸುವರು. ಕಲಾವಾಯೆಯು ತಾತ್ಕಾಲಿಕವಾಗಿ ರಸಿಕನನ್ನು ಈ ಲೋಕದಿಂದ ಮೇಲಕ್ಕೆತ್ತಿ ಸ್ವಪ್ನಲೋಕಕ್ಕೊಯ್ದು ಎದೆಯನ್ನು ಹಗುರ ಮಾಡಿ ಪುನಃ ಈ ದುರ್ಧರ ಪ್ರಪಂಚ ವ್ಯವಹಾರದಲ್ಲಿ ದುಡಿಯಲು ಹುರುಪು ಕೊಡುತ್ತದೆ.

ಮುಕ್ತಿಯನ್ನು ಕೆಲವರು ಜನನ ಮರಣಗಳಿಂದ ತಪ್ಪಿಸಿಕೊಳ್ಳುವ ಯುಕ್ತಿಯೆಂದು ತಿಳಿಯುತ್ತಾರೆ.. ಈ ತತ್ವದಂತೆ ರಸಿಕರು ಕೆಲಕಾಲ ತಮ್ಮೆದುರಿನ ವಾಸ್ತವ ಸಮಸ್ಯೆಗಳಿಂದ ದೂರ ಹೋಗಿ, ಕಲಾ[illegible]ನರಾಗಬಯಸುವುದು ಕಾರಖಾನೆಗಳಿದ್ದ ನಗರಗಳಲ್ಲಿ ಸ್ಪಷ್ಟವಾಗಿ ಕಾಣಬರುವುದು.

[illegible] ಕರ್ನ[illegible] (Subject) [illegible] ಅನೇಕ [illegible] ಸಲೀಸಾಗಬಯಸುತ್ತಾರೆ. ಪ್ರೇಮ [illegible] ಸೋಲೇ [illegible] ಯೋಗ [illegible] ಯುತ್ತಾರೆ.

ಪಡೆಯಲಾರದುದನ್ನು ಪಡೆವ ನಾನಾ ಕಥೆ ಪುರಾಣಗಳು ಸ್ವರ್ಗವನ್ನು ಸೃಷ್ಟಿಸಿದವು. ಕುರಾನು ಬೈಬಲ್ಲುಗಳು ದೇವರಾಜ್ಯಗಳನ್ನು ಕಲ್ಪಿಸಿದವು, ಕಲೆಗಾರರು ಆಶೆಗಳಿಂದ ಗಾಳಿಗೋಪುರ ಕಟ್ಟಿ ಅಜರಾಮರ ಕೃತಿಗಳನ್ನು ತಯಾರಿಸಿದರು. ರಸಿಕರು ತಮ್ಮ ಉಚ್ಚ ಆದರ್ಶವನ್ನು ಇಂಥ ಕಲ್ಪನಾ ವಿಲಾಸಗಳಿಂದ ಆಯ್ದುಕೊಳ್ಳಬಯಸುವುದು ಸಹಜ. ಕಥಾನಾಯಕನಾಯಿಕೆಯರ ಜೀವನದೊಡನೆ ಸಾಮರಸ್ಯಹೊಂದಿ ಪಡೆವ ಸುಖದಿಂದ ಹೃದಯ ವಿಶಾಲವಾಗಿ ಸದಾನಂದ ಸಿಗುವುದೆಂದು ಕೆಲವರ ನಂಬಿಗೆ. ಹೀಗೆ ರಸಿಕರ ದೃಷ್ಟಿ ಅವರ ಸಂಖ್ಯೆಯಷ್ಟು ವಿಪುಲವಿದೆ, ಆ ಯೆಲ್ಲ ದೃಷ್ಟಿಗಳೂ ಸಿನೆಮ ಮೊದಲಾದ ಕಲೆಗಳನ್ನು ಅಗತ್ಯವೆಂದು ತಿಳಿವವು. —ರಸರಾಜ

ಲಂಡನ್ನಿನ "ಡೇಲಿ ಮೇಲ್"ನವರು ಸ್ಥಾಪಿಸಿದ ರಾಷ್ಟ್ರೀಯ ಚಲಚ್ಚಿತ್ರ ಪಾರಿತೋಷಕವನ್ನು ಈ ಸಲ ಲಂಡನ್ನಿನ ಡಾರ್ಚೆಸ್ಟರ್ ಹೊಟೇಲಿನಲ್ಲಿ ಶ್ರೀಗಳಾದ (ಎಡದಿಂದ ಬಲಕ್ಕೆ) ಹರ್ಬರ್ಟ್ ವಿಲ್ಕಾಕ್ಸ್ (ನಿರ್ಮಾಪಕ—ನಿರ್ದೇಶಕ) ಮಾರ್ಗರೆಟ್ ಲಾಕ್‌ವುಡ್ (ತಾರೆ) ಮತ್ತು ಜಾನ್ ಮಿಲ್ಸ್ (ತಾರೆ) ಇವರಿಗೆ ಕೊಡಲಾಯಿತು.

## ಫಿಲ್ಮಿಸ್ತಾನದಲ್ಲಿ

ಫಿಲ್ಮಿಸ್ತಾನದವರ "ದೋ ಭಾಯಿ" ಮತ್ತು "ಲೀಲಾ" ಎಂಬೆರಡು ಚಿತ್ರಗಳು ಅನುಕ್ರಮವಾಗಿ ಮುಂಬಯಿಯ ನಾವೆಲ್ಟಿ ಮತ್ತು ರಾಕ್ಸಿ ರಂಗಗಳಲ್ಲಿ ಪ್ರದರ್ಶಿಸಲ್ಪಡುತ್ತಿವೆ. ಇವುಗಳ ನಂತರ ಆ ರಂಗಗಳಲ್ಲಿ ಅನುಕ್ರಮವಾಗಿ "ಸಾಜನ್" ಮತ್ತು "ಶಾಹೀದ್" ಎಂಬ ಚಿತ್ರಗಳನ್ನು ತೋರಿಸಲಾಗುವದು, ಸಾಜನ್ನಿನಲ್ಲಿ ಜಿಪ್ಸಿಜನರ ಶೃಂಗಾರ ಜೀವನವನ್ನು ಕಾಣಬಹುದು. ಅದರಲ್ಲಿ ಅಶೋಕಕುಮಾರ ಮತ್ತು ರೇಹನಾ ರಣಜಿತ ಕುಮಾರಿಯೊಂದಿಗೆ ಪಾತ್ರವಹಿಸಿದ್ದಾರೆ. ಶಾಹೀದಿನಲ್ಲಿ ೧೯೪೨ರ ಚಲೇಜಾವ ಚಳವಳಿಯ ಕಥೆಯನ್ನು ಅಳವಡಿಸಿಕೊಳ್ಳಲಾಗಿದೆ.

ಮುಂಬಯಿಯಲ್ಲಿ ಮೊನ್ನೆ ಜರುಗಿದ ಅ. ಭಾ. ಕಾಂಗ್ರೆಸ್ ಕಮಿಟಿಯ ಅಧಿವೇಶನದ ಸಮಯದಲ್ಲಿ ಕಾಂಗ್ರೆಸ್ ಸದಸ್ಯರಿಗೆ ಶಾಹೀದನ್ನು ತೋರಿಸಲಾಯಿತು. ಆ ವಿಶೇಷ ಪ್ರದರ್ಶನಕ್ಕೆ ಪ್ರಮುಖ ಕಾಂಗ್ರೆಸ್ ಕಾರ್ಯಕರ್ತರು ಬಂದಿದ್ದರು.

ಮತ್ತೆರಡು ಚಿತ್ರಗಳು ಫಿಲ್ಮಿಸ್ತಾನ ಚಿತ್ರಾಲಯದಲ್ಲಿ ರೂಪಗೊಳ್ಳುತ್ತಿವೆ. ಅವುಗಳ ನಾಮಕರಣವಿನ್ನೂ ಆಗಿಲ್ಲ.

## ಹಿಂದುಸ್ತಾನ ಕಲಾಮಂದಿರ

"ಅಜ್ಮಾನೀ ಕಿ ರಾಹ್‌ಪರ್" ಎಂಬುದು ಹಿಂದುಸ್ತಾನ ಕಲಾಮಂದಿರದ ಮೊದಲಿಯ ನಿರ್ಮಿತಿ. ಅದರ ತಯಾರಿಕೆಗೆ [illegible] ಒಂದು ವರ್ಷ ಹಿಡಿಯಿತು ಮತ್ತು [illegible] ಲಕ್ಷ [illegible] ಯಿಗಳ ವೆಚ್ಚ ಬಂದಿತು. [illegible] ಪ್ರಾಂತ ಮತ್ತು ಮಧ್ಯ ಭಾರತಗಳಲ್ಲಿ ಪ್ರದರ್ಶಿಸಲು ರಜಪುಟಾಣದ [illegible] ತೇಕ್ ಫಿಲ್ಮ್ [illegible] ವರಿಗೆ [illegible] ಹಿಂದುಸ್ತಾನದ ಪ್ರಸಿದ್ಧ [illegible] ಹಿಂದುಸ್ತಾನದಲ್ಲಿ ಪ್ರದರ್ಶಿಸುವ ಬಗ್ಗೆ ಈಗ ಸಂಧಾನ ನಡೆಯುತ್ತಿದೆ.

[illegible] ನೇತೃತ್ವ [illegible] ಭಾರತದ [illegible] ಕಥಾ [illegible] ವನಮಾಲಾ, [illegible] ಜಯಶ್ರೀ [illegible] ಜನರು [illegible] ಮುಂತಾದವರು ಪಾತ್ರ[illegible]

[illegible] ದಕಪೂರರು ಸಂಗೀತ ನಿರ್ದೇಶಕರು. ಸ್ಟ[illegible] ಚಿತ್ರಗ್ರಾಹಕನಾಗಿ ಕೆಲಸ ಮಾಡಿದ್ದಾನೆ.

## ಪಾರಿಸ್ತಾನ ಪಿಕ್ಚರ್ಸ್

ಪಾರಿಸ್ತಾನ ಕಂಪನಿಯು "ಹೀರ್‌ರಂಝಾ" ಎಂಬ ಪಂಜಾಬೀ ಶೃಂಗಾರ ನಾಟಕವನ್ನು ಚಿತ್ರಿಸಿದೆ. ಇದರಲ್ಲಿ ಮಮತಾಜ ಶಾಂತಿ, ಗುಲಾಮ ಮಹಮುದ್, ಶ್ರೀ ನಾಥ್ ಮುಂತಾದವರು ನಟನಟಿಯರು. ಪ್ರಸಿದ್ಧ ಚಿತ್ರ ಕಥಾಲೇಖಕರಾದ ವಾಲಿಸಾಹೇಬರು ಕಥೆಯನ್ನು ಬರೆದುಕೊಟ್ಟಿದ್ದಾರೆ.

ಮುಂದೆ ಕಂಪನಿಯು "ಕಂಟ್ರೋಲ್" ಎಂಬ ಚಿತ್ರವನ್ನು ತಯಾರಿಸಲಿದೆ. ಶ್ರೀ ಎಸ್. ಎಚ್. ಮಾಂಟೋರವರು ಕಥಾ ಲೇಖಕರು. ವಾಲೀಸಾಹೇಬರು ಸಂವಾದ ಮತ್ತು [illegible]

## ಸುರೇಶ [illegible]

"ಜೀವನ [illegible]" ಯು ಸುರೇ[illegible] ಯದ [illegible] ಸಂಗೀತಮಯ [illegible] ನಾಟಕ. ಅದರಲ್ಲಿ ಸುಂದರರಾಜ [illegible] ಮತ್ತು [illegible] ಮುಖ್ಯ ವೇಷಧಾರಿಗಳು. ಜೀವಿ ಪ್ರಭಾಷ, [illegible], ಪಿ. ಕಪೂರ್ ಮತ್ತು ಸಿರ್ಮಲ [illegible] ಇತರ ಪಾತ್ರಕಾರರು. ಶ್ರೀ ವಿಜಯ ಮೋಹನ ಗುಪ್ತರು ದಿಗ್ದರ್ಶನವನ್ನು [illegible] ಹಿಸಿದ್ದಾರೆ. [illegible] ರಿಂದ ಸಂಗೀತ ನಿರ್ದೇಶನ ನಡೆದಿದೆ. ಇವರು ಇನ್ನೂ ಅನೇಕ ಚಿತ್ರಗಳನ್ನು ಅಭಿನಯದಿಂದ ತಯಾರಿಸುವುದರಲ್ಲಿ ಮಗ್ನರಾಗಿದ್ದಾರೆ. ಅವು ಮುಂಬಯಿ ಮತ್ತು ಕಲಕತ್ತೆಗಳ ಬೇರೆ ಬೇರೆ ಚಿತ್ರಾಲಯಗಳಲ್ಲಿ ತಯಾರಾಗುತ್ತಿವೆ.

## ಅನ್ನವಷ್ಟೇ ಸಾಲದು

'ಮನುಷ್ಯನ ವ್ಯಕ್ತಿತ್ವ ಪೋಷಣೆಗೆ ಅನ್ನವಷ್ಟೇ 'ಸಾಲದು' ಎಂದರು— ಮಾನವ ಅಧಿಕಾರ ಸಮಿತಿಯ ಅಧ್ಯಕ್ಷೆಯಾದ ಶ್ರೀಮತಿ ಫ್ರಾಂಕ್ಲಿನ್ ಡಿ. ರೂಸ್‌ವೆಲ್ಟರು. ಅವರ ನೇತೃತ್ವದಲ್ಲಿ ಜಗತ್ತಿನ ೧೮ ರಾಷ್ಟ್ರಗಳ ಪ್ರತಿನಿಧಿಗಳು (ಅವರೂ ಸೇರಿ) ಆ ಸಮಿತಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಶ್ರೀ ಕೆ. ಸಿ. ನಿಯೋಗಿಯವರು ಭಾರತದ ಪ್ರತಿನಿಧಿಗಳು.

ಉಕ್ತಸಮಿತಿ ೩ ಗುಂಪುಗಳನ್ನು ಮಾಡಿಕೊಂಡು ಮಾನವನ ಹಕ್ಕುಗಳ ಘೋಷಣೆ, ನಿರ್ಣಯ ಮತ್ತು ಆಚರಣೆ ಈ ಮೂರರ ಬಗ್ಗೆ ಶ್ರಮಿಸಿತು. ಅದರ ಫಲವಾಗಿ ತಾಮ್ರಪಟವೊಂದು ಈ ಮೂರನ್ನೂ ಒಳಗೊಂಡು ಸಿದ್ಧವಾಗಿದೆ. ಅದನ್ನೀಗ ದೇಶವಿದೇಶಗಳ ಸಮ್ಮತಿ ಪಡೆಯಲು ಕಳುಹಬೇಕೆಂದು ನಿರ್ಣಯವಾಗಿದೆ. ಪಟದಲ್ಲಿ ಮುಖ್ಯಾಂಶಗಳು ಹೀಗಿವೆ:

ಪ್ರತಿಯೊಬ್ಬನಿಗೆ ರಾಷ್ಟ್ರೀಯನೆನಿಸಿಕೊಳ್ಳುವ ಹಕ್ಕಿರಬೇಕು, ಅಂದರೆ ಒಂದು ಸರಕಾರದ ರಕ್ಷಣೆ ಪಡೆವ ಹಕ್ಕು ಇರಬೇಕು; ಅವನಿಗೆ ಯಾವ ರಾಷ್ಟ್ರೀಯತೆಯೂ ಇಲ್ಲದಲ್ಲಿ ಅಂಥವನನ್ನು ಸಂ. ರಾ. ಸಂಘ ತನ್ನ ರಕ್ಷಣೆಯಲ್ಲಿ ತೆಗೆದುಕೊಳ್ಳಬೇಕು.

ಸ್ವತಂತ್ರ ವಿಚಾರ ಮಾಡುವ ಹಕ್ಕು ಎಲ್ಲರಿಗೂ ಇರಬೇಕು, ತನ್ನ ನಂಬಿಗೆಯನ್ನು ಅನುಸರಿಸಿ ಬಾಳುವ ಸೌಕರ್ಯವಿರಬೇಕು, ಪೂಜೆ ಮುಂತಾದ ವಿಧಾನಗಳಿಂದ ಅಂಥ ವಿಚಾರ, ನಂಬಿಗೆ ಇವುಗಳನ್ನು ಪ್ರಕಟಪಡಿಸುವ ಸ್ವಾತಂತ್ರ್ಯವಿರಬೇಕು. ತನ್ನ ಅಭಿಪ್ರಾಯವನ್ನು, ನಂಬಿಗೆಯನ್ನು ಆಚರಣೆಗೆ ತರಲು, ಪ್ರಚುರಪಡಿಸಲು ಅವನಿಗೆ ಅವಕಾಶ ಕೊಡಬೇಕು.

ತನ್ನ ನಾಡಿನ ಸರಕಾರದಲ್ಲಿ ಪರಿಣಾಮಕಾರಿಯಾಗಿ ಭಾಗ ವಹಿಸುವ ಹಕ್ಕು ಪ್ರತಿಯೊಂದು ವ್ಯಕ್ತಿಗೂ ಇರತಕ್ಕದ್ದು.

ಎಲ್ಲರಿಗೂ ಪ್ರಯೋಜನಕರವಾದ ಕೆಲಸ ಮಾಡಲು ಸಮಾನ ಸಂದರ್ಭಗಳು ಸಿಗುವಂತಾಗತಕ್ಕದ್ದು; ಅವರಿಗೆ ತಾವು ಮಾಡಿದ ಕೆಲಸಕ್ಕೆ ಸಂಬಳ ಪಡೆವ ಮತ್ತು ಕೂಲಿಕಾರ ಸಂಘಗಳಲ್ಲಿ ಸೇರುವ ಹಕ್ಕಿರಬೇಕು.

ಸರ್ವರಿಗೂ ತಮ್ಮ ಆರೋಗ್ಯ ಕಾದುಕೊಳ್ಳುವ ಸೌಲಭ್ಯವಿರಬೇಕು. ಸರಕಾರ ಆ ಹೊಣೆಯನ್ನು ಹೊತ್ತುಕೊಳ್ಳಬೇಕು. ಅಲ್ಲದೆ ಸಾಮಾಜಿಕ ಸುಸ್ಥಿರತೆ ಎಲ್ಲರಿಗೂ ಲಭ್ಯವಾಗಬೇಕು. ಸರಕಾರವು ನಿರುದ್ಯೋಗ, ಅಸಾಮರ್ಥ್ಯ, ವಾರ್ಧಕ್ಯ ಮತ್ತು ಇತರ ಕಾರಣಗಳಿಂದ ವೃತ್ತಿ ಭ್ರಷ್ಟನಾದ ಪ್ರತಿಯೊಬ್ಬನಿಗೂ ಆಯಾ ಸಂಕಟದಿಂದ ಪಾರು ಮಾಡುವದು ತನ್ನ ಕರ್ತವ್ಯವೆಂದು ತಿಳಿಯಬೇಕು.

ಎಲ್ಲರಿಗೂ ಎಲ್ಲ ಮಟ್ಟದ ವಿದ್ಯೆ ಪಡೆಯಲು ಸಮಾನ ಸೌಕರ್ಯಗಳಿರತಕ್ಕದ್ದು. ಅದಕ್ಕಾಗಿ ಅವರು ಹಣ ವ್ಯಯ ಮಾಡಬೇಕಾಗಿ ಬರಕೂಡದು; ಅದು ಒತ್ತಾಯದಿಂದ ಪ್ರತಿಯೊಬ್ಬನಿಗೂ ಲಭ್ಯವಾಗಬೇಕು.

ವ್ಯಕ್ತಿಯೊಬ್ಬನಿಗೂ ವಿಶ್ರಾಂತಿಯ ಹಕ್ಕಿಲ್ಲದಾಗಕೂಡದು- ರಜೆಯಲ್ಲಿ ಸಂಬಳ ಸಿಗಬೇಕು. ಕೆಲಸದ ಗಂಟೆಗಳು ಮಿತವಿರಬೇಕು.

ತನ್ನ ನಾಡಿಗರ, ಕುಲದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಸರ್ವರಿಗೂ ಅವಕಾಶವಿರತಕ್ಕದ್ದು; ನಾಡಿನ ಕಲೆ ಮತ್ತು ವಿಜ್ಞಾನಗಳ ಪ್ರಯೋಜನ ಪಡೆವ ಹಕ್ಕಿರಬೇಕು.

[illegible] ನಾಗರಿಕ [illegible] ಪ್ರತಿಯೊಂದು [illegible]

ಶ್ರೀಮತಿ ಎಲೀನರ ರೂಜವೆಲ್ಟ

ದೊರಕಿಸಿಕೊಡಬೇಕೆಂದೂ ಸಲಹೆ ಮಾಡಲಾಗಿದೆ. ಈ ಇಡಿ ಪಟದ ಮೂಲತತ್ವ "ಗುಣಃ: [illegible] ವಯ:" ಎಂಬ ತತ್ವಕ್ಕೆ ಹೋಲುವಂಥದಿದೆ. ಅಂದರೆ ಮನುಷ್ಯರೆಲ್ಲರೂ ಸಮಾನರು, ಗಂಡಸರೂ ಹೆಂಗಸರೂ ಸಮಾನರು, ಎಲ್ಲರಿಗೂ ಸಾಮಾಜಿಕ ಮತ್ತು ಆರ್ಥಿಕ ಸ್ಥಾನ ಮಾನಗಳನ್ನು ಪಡೆವಲ್ಲಿ ಸಮಾನಾವಕಾಶವಿರಬೇಕು; ಮನುಷ್ಯರಲ್ಲಿ ಕುಲ, ಬಣ್ಣ ಲಿಂಗ, ಭಾಷೆ, ಧರ್ಮ, ಸಾಮಾಜಿಕಸ್ಥಾನ, ಆರ್ಥಿಕಸ್ಥಿತಿ, ರಾಜಕೀಯಸ್ಥಾನ ಮತ್ತು ಅಭಿಪ್ರಾಯ ಈ ಯಾವುದನ್ನೂ ಗಣಿಸದೆ ಅವರೆಲ್ಲರಿಗೂ ಸಮಾನ ಹಕ್ಕುಗಳು ದೊರೆಯಬೇಕು- ಎಂಬುದೇ. ಇಷ್ಟಲ್ಲದೆ ಪ್ರತಿಯೊಂದು ನಾಡಿನ ಸರಕಾರವೂ ರಾಷ್ಟ್ರೀಯ, ಕುಲಜನ್ಯ ಇಲ್ಲವೆ ಧರ್ಮ ಸಂ[illegible] ದನ್ನು ಕಾಯದೆಯಿಂದ ಬಹಿಷ್ಕರಿಸಬೇಕೆಂದೂ [illegible] ಪಟದಲ್ಲಿ ಹೇಳಲಾಗಿದೆ. ಇಷ್ಟಾದರೆ ಮಾತ್ರ ಜಗತ್ತಿನ ಪ್ರತಿಯೊಂದು ಮನುಷ್ಯ ವ್ಯಕ್ತಿಗೂ ತನ್ನಷ್ಟಕ್ಕೆ ತಾನು ಮಾನವ ಯೋಗ್ಯವಾದ ಘನಸ್ತಿಕೆ ಮತ್ತು ಸುರಕ್ಷಿತತೆಗಳಿಂದಬಾಳುವ ಅವಕಾಶ ಸಿಗುವಂತಾದೀತು.

ಈ ತಾಮ್ರಪಟದಲ್ಲಿ ಸಾರಿದ ಅಂಶಗಳೆಲ್ಲವನ್ನೂ ಎಲ್ಲ ನಾಡುಗಳೂ ಏಕಕಾಲದಲ್ಲಿ ಅನುಸರಿಸಲು ಶಕ್ತವಾಗದಿರಬಹುದು; ಆದರೆ ಈ ಧ್ಯೇಯಗಳಲ್ಲಿ ಆದಷ್ಟನ್ನು ಆದಷ್ಟು ಶೀಘ್ರವಾಗಿ ಸಾಧಿಸುವ ಬುದ್ಧಿ ಮತ್ತು ನಿಶ್ಚಯವಾದರೂ ದೇಶಗಳ ಸರಕಾರಗಳಲ್ಲಿ ಉದಯವಾಗಲೆಂದು ಶ್ರೀಮತಿ ಎಲಿನರ್ ರೂಜವೆಲ್ಟರು ಹಾರೈಸಿದ್ದನ್ನು ಗಮನಕ್ಕೆ ತಾದುಕೊಂಡು, ದಿನೇ ದಿನೇ ಗಂಡಾಂತರ ಪರಿಸ್ಥಿತಿಯತ್ತ ಜಗತ್ತು ಹೊರಳುತ್ತಿರುವುದನ್ನು ತಡೆದು ಮಾನವ ಕೋಟಿಯ ಕಲ್ಯಾಣಕ್ಕೆ ಕಂಕಣಬದ್ಧರಾಗುವುದು ಕರ್ತವ್ಯವೆಂದು! ಎಚ್ಚರಿಸುವ ಅವಶ್ಯಕತೆಯುಂಟಾಗದಂತೆ ಜಗತ್ತಿನ ಸಭ್ಯತೆಗಳು ನೋಡಿಕೊಳ್ಳುವವೆ? ಹಾಗಾದರೆ ಮನಸ್ಸಿಗೆ (ಸತ್‌+ ಚಿತ್‌+ ಆನಂದ) ಸಂತೋಷವುಂಟಾಗುವ ಸಂದರ್ಭ ಉಂಟಾಗಬಹುದೇ? ಉಣ್ಣುವುದಕ್ಕಾಗಿ ಬದುಕುವ ಜೀವನ ಕ್ರಮ [illegible] ಮುಕ್ತಿಹೊಂದಿ, ಬದುಕುವುದಕ್ಕಾಗಿ ಉಣ್ಣುವ ಮತ್ತು ಮೂಲಭೂತ ಸೌಕರ್ಯಗಳನ್ನು ಪಡೆದ ಜೀವನಕ್ರಮ ಸರ್ವರಿಗೂ ಸಾಧ್ಯವಾಗಬಲ್ಲುದೇ?

[illegible]

# ಇಂಗ್ಲಂಡಿನಲ್ಲಿ ಗೋಪಾಲನೆಯಲ್ಲಿ ಹೊಸ ಉಪಾಯಗಳು

## ತುಪ್ಪದ ಸಹಕಾರಿ ಸಂಘಗಳು

ಮಧ್ಯಪ್ರಾಂತ ಸರಕಾರದ ಸೂಚನೆಯ ಮೇರೆಗೆ ತುಪ್ಪದ ಸುಸಂಘಟಿತ ಉತ್ಪಾದನೆ ಮತ್ತು ಮಾರಾಟಕ್ಕೋಸ್ಕರ ಬೇತುಲ ಜಿಲ್ಲೆಯಲ್ಲಿ ೧೦ ಸ್ಥಳಗಳಲ್ಲಿ ಸಹಕಾರಿ ಪದ್ಧತಿಯನ್ನು ಆಚರಣೆಗೆ ತರುವದಕ್ಕಾಗಿ ಕೇಂದ್ರ ಸರಕಾರದವರು ೬೦೦೦೦ ರೂಪಾಯಿಗಳ ವರೆಗೆ ಸಹಾಯ ನೀಡಲು ಒಪ್ಪಿದ್ದಾರೆಂದು ತಿಳಿಯುತ್ತದೆ. ಹಾಲಿನ ಉತ್ಪಾದಕರ ಸಹಕಾರಿ ಸಂಘಗಳನ್ನು ಈ ಬಗ್ಗೆ ಸ್ಥಾಪಿಸಲಾಗುವವು.

ಈ ಯೋಜನೆಯ ಪ್ರಕಾರ ಹಾಲಿನಿಂದ ಕೆನೆ ತೆಗೆದು ಅದರಿಂದ ತುಪ್ಪ ಮಾಡುವ ಪದ್ಧತಿಯನ್ನು ಬಳಕೆಗೆ ತರಲಾಗುವದು. ಹೀಗೆ ಮಾಡುವದರಿಂದ ತುಪ್ಪದ ಯೋಗ್ಯತೆ ಹೆಚ್ಚುವದಲ್ಲದೆ ಹೆಚ್ಚು ತುಪ್ಪವೂ ಬರುವದು. ಕೆನೆ ತೆಗೆದ ಹಾಲಿನಪುಡಿಯೆಂಬ ಪುಷ್ಟಿಕರ ಉಪ-ಉತ್ಪತ್ತಿಯೂ ಸಿಗುವದು. ಹೀಗೆ ಗೌಳಿಗರ ಉತ್ಪನ್ನ ಹೆಚ್ಚುವದೆಂದೂ ಅದರ ಪರಿಣಾಮವಾಗಿ ಪಶುಪಾಲನದ ಉದ್ಯಮ ಸುಧಾರಿಸುವದೆಂದೂ ನಿರೀಕ್ಷಿಸಲಾಗಿದೆ.

× × ×

## ಬ್ರಿಟಿಶ ಪ್ರಯೋಗಗಳು

ಬ್ರಿಟನ್ನಿನಲ್ಲಿ ಈಗ ಸುಮಾರು ಹದಿನೈದು ವರ್ಷಗಳಿಂದ ಪಶುಪಾಲನೆಯ ಉದ್ಯೋಗದಲ್ಲಿ ಹಲವು ಪ್ರಯೋಗಗಳಾಗಿವೆ. ಅವುಗಳಿಂದ ರೈತರಿಗೆ ತುಂಬ ಲಾಭವಾಗಿದೆ. ದೇಶದಲ್ಲಿರುವ ಆಹಾರದ ಕೊರತೆಯನ್ನು ಕಡಿಮೆ ಮಾಡಲು ಹಾಲು ಅವರಿಗೆ ಸಹಾಯ ಮಾಡಿದೆ. ಯುದ್ಧ ಕಾಲದಲ್ಲಿ ಮೇವುಗಳ ಕೊರತೆಯಿದ್ದರೂ ೧೯೩೯ ಕ್ಕಿಂತ ೧೯೪೭ ರಲ್ಲಿ ನೂರಕ್ಕೆ ಹತ್ತರಷ್ಟು ಹೆಚ್ಚು ಹಾಲು ಹುಟ್ಟಿತು. ಇದರಿಂದ ದೇಶಕ್ಕೆ ವರ್ಷಕ್ಕೆ ೧೫ ಕೋಟಿ ರೂಪಾಯಿ ಉತ್ಪನ್ನವಾಗುತ್ತದೆ.

× × ×

ಬ್ರಿಟನ್ನಿನಲ್ಲಿ ಒಟ್ಟು ೩೦ ಲಕ್ಷ ದನಗಳೂ ಅವುಗಳಿಗೆ ಸಂಬಂಧಪಟ್ಟ ಪಶುಗಳೂ ಇವೆ. ಸರಾಸರಿ ೧೫ ದನಗಳ ೧,೬೦,೦೦ ಮಂದೆಗಳಿವೆಯೆಂದು ಹೇಳಬಹುದು. ಹಾಲಿನ ಉತ್ಪಾದನೆಯನ್ನು ಅಲ್ಲಿ ಚೆನ್ನಾಗಿ ಸಂಘಟಿಸಲಾಗಿದೆ. ಈ ಮಂದೆಗಳ ಒಡೆಯರೆಲ್ಲ ಸೇರಿ ೧೯೩೩ ರಲ್ಲಿ ಒಂದು ಮಾರಾಟದ ಯೋಜನೆ ಮಾಡಿಕೊಂಡು ಸರಕಾರದ ಆಜ್ಞೆಯ ಪ್ರಕಾರ ಇದು ಜಾರಿಗೆ ಬಂದಿತು. [illegible] ಯ ಪರವಾಗಿ "ಹಾಲಿನ ಮಾರಾಟದ ಮಂಡಲ" ವೊಂದು ಎಲ್ಲ ಹಾಲುಕೊಳ್ಳುವ ಮಾರುವ ವ್ಯವಹಾರ ನಡೆಸುತ್ತಿದೆ.

ಹಾಲು ಕೊಂಡು ಮಾರುವದೊಂದೇ ಈ ಮಂಡಲದ ಕೆಲಸವಲ್ಲ. ಅದು ಹಾಲಿನ ಉತ್ಪಾದನೆಯನ್ನು ಹೆಚ್ಚಿಸಲು ಅನೇಕ ಪ್ರಯೋಗಗಳನ್ನು ಮಾಡಿದೆ. ಹುಲ್ಲನ್ನು ಒಣಗಿಸಿ ಚಳಿಗಾಲಕ್ಕಾಗಿ ಕಾಯ್ದಿಡುವ ಬಗ್ಗೆ ಅದು ಸಂಶೋಧನೆಗಳನ್ನು ಮಾಡುತ್ತಿದೆ.

## ಆರೋಗ್ಯ ರಕ್ಷಣೆ

ರಾಷ್ಟ್ರದ ಹಾಗು ಪಶುಕುಲದ ಆರೋಗ್ಯ ರಕ್ಷಣೆಗಾಗಿಯೂ ಈ ಮಂಡಲ ಹಲವು ಉಪಾಯಗಳನ್ನು ಮಾಡಿದೆ. ಮಂದೆಗಳನ್ನು ವೈದ್ಯಕೀಯ ಪರೀಕ್ಷೆಗೆ ಒಳಗು ಮಾಡಲಾಗುತ್ತದೆ. ಇಂಥ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಮಂದೆಗಳ ಒಡೆಯರಿಗೆ ಹಾಲಿನ ಗ್ಯಾಲನ್ನಿಗೆ ಅರ್ಧಾಣೆಯಂತೆ ಹೆಚ್ಚು ಬೆಲೆ ಕೊಡುವರು. ಇದಲ್ಲದೆ ಹಾಲನ್ನೂ ರೋಗಾಣುಗಳಿಂದ ಮುಕ್ತಗೊಳಿಸಲಾಗುವದು. ಮುಖ್ಯವಾಗಿ ಕ್ಷಯರೋಗದ ವಿಷಯದಲ್ಲಿ ದನಕರುಗಳ ಪರೀಕ್ಷೆಯನ್ನು ಬಹಳ ಎಚ್ಚರಿಕೆಯಿಂದ ಮಾಡಲಾಗುತ್ತದೆ.

× × ×

ಚಿಕ್ಕ ಚಿಕ್ಕ ಮಂದೆಗಳಿರುವದರಿಂದ ಬೀಜದ ಹೋರಿಗಳ ವ್ಯವಸ್ಥೆ ಕಠಿಣ ಹೋಗುತ್ತದೆ. ೧೦—೧೫ ದನಗಳನ್ನಿಟ್ಟುಕೊಂಡವನಿಗೆ ಒಂದು ಬೀಜದ ಹೋರಿ ಸಾಕುವದು ಸಾಧ್ಯವಿಲ್ಲ. ಇದಕ್ಕಾಗಿ ಸರಕಾರಿ ಹಣದಿಂದ ಸಾರ್ವಜನಿಕ ಬೀಜದ ಹೋರಿಗಳನ್ನಿಡುವ ವ್ಯವಸ್ಥೆಯಿದ್ದರೂ ಅದರಿಂದ ರೋಗ ಹಬ್ಬುವ ಭಯವಿದೆ. ಇದಕ್ಕೆ ೧೯೪೫ ರಿಂದಲೂ ಕೃತಕ ವೀರ್ಯಾಧಾನದಿಂದ ದನಗಳಿಗೆ ಗರ್ಭಧಾರಣ ಮಾಡಿಸುವ ಪ್ರಯೋಗ ಮಾಡಿ ಯಶಸ್ವಿಗಳಾಗಿದ್ದಾರೆ. ಇದರಿಂದ ಉತ್ತಮ ಜಾತಿಯ ದನಕರುಗಳು ಹೆಚ್ಚುವವು. ಒಂದು ದನಕ್ಕೆ ಹೀಗೆ ಗರ್ಭಧಾರಣ ಮಾಡಿಸಲು ರೂ. ೧೬—೮೦ ವೆಚ್ಚ ಬರುವದು.

× × ×

ಈ ಮಂಡಳವು ಕಳೆದ ೫ ವರ್ಷಗಳಿಂದ ಮಾಡಿದ ಕೆಲಸದ ಫಲವಾಗಿ ಪ್ರತಿ ದನದ ಸರಾಸರಿ ಹಾಲಿನ ನೂರಕ್ಕೆ ೧೨ ರಷ್ಟು ಹೆಚ್ಚಿದೆ.

ಈ ದೇಶದಲ್ಲಿಯೂ ಇಂಥ ಪ್ರಯೋಗಗಳ ಆವಶ್ಯಕತೆಯುಂಟು.



ದನ ಕರೆಯುವ ಯಂತ್ರ: ಜೋಡು ಜೋಡು ದನಗಳನ್ನು ಇಂಗ್ಲಂಡಿನಲ್ಲಿ ಈ ಬಗೆಯಾಗಿ ಕರೆಯುತ್ತಾರೆ. ಹಾಲು ಗಾಜಿನ ಪಾತ್ರೆಯಲ್ಲಿ ತುಂಬುತ್ತದೆ.



# ವಿಶ್ವವಿಜಯಕ್ಕೆ ಸ್ಟಾಲಿನ್ನರ ಒಳ-ಹಂಚಿಕೆ

( ೫ ನೇ ಪುಟದಿಂದ )

## ರಶಿಯನ್ ಸೈನ್ಯ

ಶಾಂತಿ ಕಾಲದ ರಶಿಯನ್ ಸೈನ್ಯಬಲ ಹೀಗಿರಬೇಕೆಂದು ಗುಪ್ತ ನಿರ್ಧಾರ ಮಾಡಲಾಗಿದೆ:

೩೦ ದಂಡುಗಳಷ್ಟು ಆಕಾಶ ಸೇನೆ.
೨೦ ದಂಡು ಕವಚಸಜ್ಜಿತ ಸೈನ್ಯ.
೪೦ ದಂಡು ಕಾಲ್ಬಲ (ಅದರಲ್ಲಿ ೨೦ ದಂಡು ಯಂತ್ರ ಸಜ್ಜಿತ.)
೧೫ ದಂಡು ಅಶ್ವ ಸೇನೆ (ಅದರಲ್ಲಿ ೮ ಯಂತ್ರ ಸಜ್ಜಿತ.)
೧೫ ದಂಡು ತೋಫಿನ ಸೈನ್ಯ (ಅದರಲ್ಲಿ ೧೦ ಯಂತ್ರ ಸಜ್ಜಿತ.)

ಈ ಪ್ರಕಾರ ಸೋವಿಯಟ್ ಸೈನ್ಯ ಅತ್ಯುತ್ತಮ ಸುಸಜ್ಜಿತ ಬಲವಾಗಿದೆ. ಅದಕ್ಕೆ ಸಾಕಷ್ಟು ಯುದ್ಧಾನುಭವವೂ ಇದೆ. ಯುದ್ಧದ ಪ್ರಥಮ ದಿನಗಳಲ್ಲಿ ಪ್ರಚಂಡ ಆಘಾತಗಳನ್ನು ಮಾಡಲು ವಿಮಾನ ಮೂಲಕ ಸಾಗಬಲ್ಲ ಕೊಡೆ ಸೈನಿಕರ ಬಲವೂ ಸುಸಂಘಟಿತವಾಗಿದೆ.

ಅಣುಬಾಂಬುಗಳಿಂದ ತಮ್ಮ ಯುದ್ಧ ಸಾಮುಗ್ರಿ ಕಾರಖಾನೆಗಳು ನಾಶಹೊಂದಬಹುದೆಂಬ ಭಯವೇನೂ ರಶಿಯನ್ ಸೇನಾನಾಯಕರನ್ನು ಬೆದರಿಸುವದಿಲ್ಲ. ಅವರ ಉದ್ಯಮಗಳು ವಿಸ್ತಾರವಾದ ದೇಶದಲ್ಲಿ ದೂರ ದೂರ ಹಬ್ಬಿರುವದರಿಂದ ಒಮ್ಮೆಂದೊಮ್ಮೆ ಅವು ಗಂಡಾಂತರಕ್ಕೊಳಗಾಗಲಿಕ್ಕಿಲ್ಲೆಂದು ಅವರು ನಂಬಿದ್ದಾರೆ. ಸಾಲದ್ದಕ್ಕೆ ಅವರು ಪ್ರತಿಯೊಂದು ವಲಯದಲ್ಲಿ ಜೋಡು ಜೋಡು ಔದ್ಯೋಗಿಕ ಕೇಂದ್ರಗಳನ್ನು ರಚಿಸಿದ್ದಾರೆ. ಒಂದು ತಾತ್ಕಾಲಿಕವಾಗಿ ಹಾಳಾದರೂ ಇನ್ನೊಂದರ ಬಲದಿಂದ ಸಾಗಿಸಿಕೊಂಡು ಹೋಗಬಹುದು. ಅಲ್ಲದೆ ಅವರು ಔದ್ಯೋಗಿಕ [illegible] ಇಮ್ಮಡಿ ಮುಮ್ಮಡಿ [illegible] ಗಳನ್ನೂ ಹಾಕುವವರಿದ್ದಾರೆ.

ಅಣುಬಾಂಬುಗಳನ್ನು ಬಹುಸಂಖ್ಯೆಯಲ್ಲಿ ಉತ್ಪಾದಿಸುವದು ರಶಿಯನ್ನರಿಗೆ ಸಾಧ್ಯವಾದರೆ ಅವರ ಶತ್ರುಗಳೂ ಅವುಗಳನ್ನು ಪ್ರಯೋಗಿಸಲು ಹೆದರಬಹುದು. ಕಳೆದ ಯುದ್ಧದಲ್ಲಿ ವಿಷವಾಯು ಪ್ರಯೋಗವನ್ನು ಇದೇ ಕಾರಣದಿಂದ ಎಲ್ಲರೂ ತಡೆಹಿಡಿಯಲಿಲ್ಲವೆ?

## ಒಂದೇ ಭಯ

ಸೋವಿಯಟ್ ಸೇನಾನಾಯಕರಿಗಿರುವ ನಿಜವಾದ ಒಂದು ಭೀತಿಯೆಂದರೆ ಎಣ್ಣೆಯ ಪೂರೈಕೆಯದು. ಯುದ್ಧದ ಮೊದಲ ದಿನಗಳಲ್ಲೇ ಬಾಕು ಮತ್ತು ರುಮೇನಿಯಾದ ಎಣ್ಣೆಗಣಿಗಳನ್ನು ಬಾಂಬಿನ ಮೂಲಕ ನಾಶಗೊಳಿಸಲು ಶತ್ರುಗಳು ಸಮರ್ಥರಾದರೇನು ಗತಿ? ಆಗ ಎರಡನೆಯ ಅವಸ್ಥೆಯನ್ನು ಪೂರೈಸಲು ರಶಿಯನ್ನರ ಎಣ್ಣೆ ಪೂರೈಕೆ ಸಾಲುವದೆ? ಈ ಯುದ್ಧಕ್ಕೆ ಅಸಾಧಾರಣ ಪ್ರಮಾಣದಲ್ಲಿ [illegible] ಬೇಕು. ಅದಿಲ್ಲದೆ ಎರಡನೆ ಅವಸ್ಥೆ [illegible] ದರೆ ಮತ್ತು ಆ ಸಂಧಿಸಾಧಿಸಿ ಅಮೇರಿಕ [illegible] ಮುನ್ನುಗ್ಗಿದರೆ ಎಲ್ಲ ಯೋಜನೆಗಳು ಮಣ್ಣು ಮುಕ್ಕಿ ಚೀನದಲ್ಲೊಂದೇ ಹೋರಾಡುವ ಬದಲು ಮೂರು ಬದಿಗಳಲ್ಲಿ ಹೋರಾಡುವ ಪಾಳಿ ಬಂದೀತು.

ರಶಿಯನ್ನರಿಗೆ ಈ ಸಂಭಾವ್ಯತೆ ಸ್ವಾಭಾವಿಕವಾಗಿ ಒಗ್ಗುವದಿಲ್ಲ!

# ಮಾಂಕ್ಟನ್ನರಿಗೂ ಬೇಸರ

ಹಿಂದ—ಹೈದರಾಬಾದ ಒಡಂಬಡಿಕೆಯ ಕರಡು ಮೂರ್ತ ಸ್ವರೂಪಕ್ಕೆ ಬರಲು ನಿಜಾಮರ ಘಟನಾ ಸಲಹೆಗಾರರಾದ ಸರ ವಾಲ್ಟರ ಮಾಂಕ್ಟನ್ನರು ಅದೆಷ್ಟೋ ಪ್ರಯಾಸಪಟ್ಟು ಕೊನೆಗೆ ನಿಜಾಮರ ಹಟಮಾರಿತನಕ್ಕೆ ಬೇಸರಪಟ್ಟು ಲಂಡನ್ನಿಗೆ ಹಿಂದಿರುಗಿದರು. ಅವರು ವಿದೇಶಿ ಸುದ್ದಿಗಾರರಿಗೋಸ್ಕರ ಒಂದು ಪ್ರಕಟನೆ ಹೊರಡಿಸಿ ಅದರಲ್ಲಿ ನಿಜಾಮರ ಕಾಲಹರಣ ಧೋರಣವನ್ನೂ ಹರಿಯುವ ವರೆಗೆ ಜಗ್ಗಿದ ಅವರ ಅದೂರದರ್ಶಿ ಮತ್ತು ಅಸಮಂಜಸ ವೃತ್ತಿಯನ್ನೂ ಖಂಡಿಸಿರುವರೆಂದು ತಿಳಿಯುತ್ತದೆ.

ಒಡಂಬಡಿಕೆಯ ಕರಡಿನ ಬಗ್ಗೆ ನಿಜಾಮರ ಪ್ರತಿಕೂಲ ಪ್ರತಿಕ್ರಿಯೆಯನ್ನು ಕಂಡು ಲಾರ್ಡ ಮೌಂಟಬ್ಯಾಟನ್ನರು ನಿಜಾಮರಿಗೆ ಒಂದು ಪತ್ರ ಬರೆದು ತಮ್ಮ ನಿರಾಶೆಯನ್ನು ವ್ಯಕ್ತ ಮಾಡಿರುವರೆಂದೂ ಇದಕ್ಕಿಂತ ಹೆಚ್ಚು ಸೌಕರ್ಯಗಳು ಸಿಗಲಾರವೆಂದೂ ಸ್ಪಷ್ಟಪಡಿಸಿ ಒಡಂಬಡಿಕೆಯೇ ಕ್ಷೇಮಕರವೆಂದು ಬುದ್ಧಿ ಹೇಳಿರುವರಾಗಿಯೂ ತಿಳಿಯುತ್ತದೆ.

# ಗಾಂಧೀ ಸ್ಮಾರಕ ತಿಕೀಟು

೫೦ ಲಕ್ಷ ಮಹಾತ್ಮಾ ಗಾಂಧಿಯವರ ಸ್ಮಾರಕ ತಿಕೀಟುಗಳು ತಾ. ೧೩ ರಂದು ಜಿನೇವಾದಿಂದ ಮುಂಬಯಿಗೆ ಬಂದು ತಲ್ಪಿದವು. ಒಟ್ಟು ಮೂರು ಕೋಟಿ ತಿಕೀಟುಗಳನ್ನು ಮುದ್ರಿಸಲಾಗುವದು. ಈ ತಿಕೀಟುಗಳ ಮೇಲೆ ಗಾಂಧೀಜಿಯ ಚಿತ್ರ ಮತ್ತು ಹಿಂದಿ ಉರ್ದು ಲಿಪಿಯಲ್ಲಿ 'ಬಾಪು' ಶಬ್ದ ಮುದ್ರಿಸಲಾಗಿದೆ. ಇವುಗಳನ್ನು ಸ್ವಿಝರಲಂಡದಲ್ಲಿ ಅಚ್ಚುಹಾಕಿಸಲಾಗಿವೆ. ಸ್ವಾತಂತ್ರ್ಯೋತ್ಸವದ ಪ್ರಥಮ ವಾರ್ಷಿಕ ಸಮಾರಂಭದ ದಿವಸ ಇವನ್ನು ಪ್ರಸಿದ್ಧಿಸಲಾಗುವದು. ಜಗತ್ತಿನ ಅನೇಕ ಭಾಗಗಳಿಂದ ಇವುಗಳ ಬಗ್ಗೆ ಬೇಡಿಕೆಗಳು ಬರುತ್ತಿದ್ದು ಎಲ್ಲೆಡೆಗೂ ಇವು ಜನಪ್ರಿಯವಾಗಬಹುದೆಂದು ನಿರೀಕ್ಷಿಸಲಾಗಿದೆ. ಬ್ರಿಟನ್ ಮತ್ತು ಅಮೇರಿಕೆಗಳಿಗೆ ಈ ತಿಕೀಟುಗಳನ್ನು ನೇರವಾಗಿ ಜಿನೇವಾದಿಂದಲೇ ಕಳಿಸುವ ವಿಶೇಷ ವ್ಯವಸ್ಥೆ ಮಾಡಲಾಗಿದೆ.

# ಲಾಭಬಡಕತನಕ್ಕೆ ೧ ಲಕ್ಷ ರೂ. ದಂಡ

## ೧ ವರ್ಷ ಸಶ್ರಮ ಶಿಕ್ಷೆ

ಮುಂಬಯಿ ಪ್ರಸಿಡೆನ್ಸಿ ಮ್ಯಾಜಿಸ್ಟ್ರೇಟರಾದ ಶ್ರೀ. ಟಿ. ಎರ್. ವ್ಯಾಸರು ಮುಂಬಯಿಯ ಅರಿವೆಯ ವ್ಯಾಪಾರಸ್ಥನಾದ ಮೋಹನದಾಸ ಭೂರಾಮಲ ಎಂಬವನಿಗೆ ಲಾಭಬಡಕತನಕ್ಕಾಗಿ ೧ ವರ್ಷ ಸಶ್ರಮ ಶಿಕ್ಷೆಯನ್ನೂ ೧ ಲಕ್ಷ ರೂ. ದಂಡವನ್ನೂ ವಿಧಿಸಿದ್ದರು. ಈ ತೀರ್ಪನ್ನು ಮುಂಬಯಿ ಹಾಯಕೋರ್ಟನಲ್ಲಿ ಮುಖ್ಯ ನ್ಯಾಯಾಧೀಶರೂ ಮತ್ತು ನ್ಯಾಯಮೂರ್ತಿ ಶ್ರೀ. ಗಜೇಂದ್ರಗಡಕರರೂ ದೃಢೀಕರಿಸಿವರು.

೬ ರೂ. ೧೪ ಅ. ನಿಯಂತ್ರಿತ ಬೆಲೆ ಇದ್ದ ಸೀರೆಯನ್ನು ೧೧ ರೂ. ಗಳಿಗೆ ಮಾರಿದನೆಂಬ ಆರೋಪ ಈ ವ್ಯಾಪಾರಿಯ ಮೇಲಿತ್ತು. ಇದರಿಂದಉಳಿದ ಕಡೆಯ ವ್ಯಾಪಾರಿಗಳೂ ಬುದ್ಧಿ ಕಲಿಯಲಿ.

# ಕರ್ನಾಟಕ

## ಧಾರವಾಡ

ಗದಗ ಕೇಂದ್ರದಿಂದ ಮುಲ್ಕೀ ಪರೀಕ್ಷೆಗೆ ಕುಳಿತ ೧೦೪೫ ವಿದ್ಯಾರ್ಥಿಗಳಲ್ಲಿ ೪೩೮ ಪಾಸಾಗಿರುವರು. ಅಂದರೆ ೧೦೦ ಕ್ಕೆ ೪೨ ವಿದ್ಯಾರ್ಥಿಗಳು ಒಟ್ಟಾರೆ ಪಾಸಾಗಿರುವರು. ಗದಗ ಕನ್ನಡ ಸೆಂಟ್ರಲ ಸ್ಕೂಲಿನ ಪರಿಣಾಮ ೧೦೦ ಕ್ಕೆ ೭೧ ಆಗಿರುತ್ತದೆ. ಈ ಸಾಲೆಯ ಸಾವಕಾರ ಎಂಬ ವಿದ್ಯಾರ್ಥಿಯು ಕೇಂದ್ರಕ್ಕೆ ೧ ನೇ ನಂಬರ ಬಂದಿರುವನು.

ಗದುಗಿನ ಸಬ್ ಇನಸ್ಪೆಕ್ಟರ ಶ್ರೀ ಆರ್. ಎಸ್. ಪಾಟೀಲರು ಬೆಟಗೇರಿಯ ಬೀಟ ಆಫೀಸರರೊಂದಿಗೆ ನಾಗಪ್ಪ ಕುರುಬರ ಇವರ ಚಹಾದ ಅಂಗಡಿಗೆ ಮುತ್ತಿಗೆ ಹಾಕಿ ಜೂಜಾಡುತಿದ್ದ ೧೩ ಜನರನ್ನು ಸೆರೆಹಿಡಿದು ಅವರ ಹಣವನ್ನು ಜಪ್ತ ಮಾಡಿದರು.

ಹುಬ್ಬಳ್ಳಿಯ ಶ್ರೀ ಸಿದ್ಧಾರೂಢ ಸ್ವಾಮಿಯವರ ಶಿಷ್ಯರೂ ಪ್ರಸಿದ್ಧ ವಿದ್ವಾಂಸರೂ ಆಗಿದ್ದ ಶ್ರೀ ಪೀತಾಂಬರಪ್ಪ ಟೊಪ್ಪಿಗಿ ಹಳೇಹುಬ್ಬಳ್ಳಿ ಇವರು ೨೧ ಕ್ಕೆ ದಿವಂಗತರಾದರು. ಇವರು ಸ್ವಾನುಭವ ಚಂದ್ರೋದಯ ಎಂಬ ಗ್ರಂಥವನ್ನು ಬರೆದು ಕನ್ನಡ ನಾಡ ಸೇವೆ ಮಾಡ್ತಿರುವರು. ಪರಮಾತ್ಮನು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ.

ಧಾರವಾಡ ಜಿಲ್ಹಾ ಮುಲ್ಕಿ ಖಾತೆಯ ನವಕರ ಸಂಘದ ವಾರ್ಷಿಕ ಸಭೆ ಶ್ರೀ ಹುಕ್ಕೇರಿಕರರ ಅಧ್ಯಕ್ಷತೆಯಲ್ಲಿ ಸೇರಿತ್ತು. ಆಗ ಅವರು ಪರಿಸ್ಥಿತಿಯಲ್ಲಾದ ಬದಲಾವಣೆಯನ್ನು ಹೇಳುತ್ತ ಸಂಬಳ ಭತ್ತೆ ಮೊದಲಾದ್ದಕ್ಕಾಗಿ ಸಂಪು ಮುಂತಾದ್ದನ್ನು ಹೂಡದೆ ಪ್ರೇಮ ಹಾಗು ನಮ್ರತನದಿಂದಲೆ ನ್ಯಾಯವನ್ನು ದೊರಕಿಸಿಕೊಳ್ಳಬೇಕು ಎಂದು ಮುಂತಾಗಿ ಹೇಳಿದರು. ಹೆಚ್ಚು ನವಕರರನ್ನು ನೇಮಿಸಿಕೊಳ್ಳಬೇಕು ಭತ್ತೆ ಸಂಬಳ ಹೆಚ್ಚಿಸಬೇಕು ಮೊದಲಾಗಿ ಸರಕಾರದವರನ್ನು ಕೇಳಿಕೊಳ್ಳಲಾಯಿತು.

## ಬೆಂಗಳೂರು--ಮೈಸೂರು

ತಾತಾ ವಿಜ್ಞಾನ ಮಂದಿರದಿಂದ ಬೇಗ ನಿವೃತ್ತರಾಗಿ ಬೆಂಗಳೂರಿನಲ್ಲಿ ತಮ್ಮ ಸ್ವಂತ ವಿಜ್ಞಾನ ಸಂಶೋಧನ ಕೇಂದ್ರದಲ್ಲಿ ಕೆಲಸ ಪ್ರಾರಂಭಿಸಲಿರುವ ಶ್ರೀ ಸಿ. ವಿ. ರಾಮನ್‌ರ ಗೌರವಾರ್ಥ ಬೆಂಗಳೂರಿನಲ್ಲಿ ಸಂತೋಷಕೂಟ ವೇರ್ಪಡಿಸಲ್ಪಟ್ಟಾಗ ಸರ್ ಸಾಹೇಬರು ತಮ್ಮ ಇತ್ತೀಚಿನ ಇಂಗ್ಲಂಡ ಪ್ರವಾಸದ ಅನುಭವವನ್ನು ವಿವರಿಸಿದರು. ಈ ಸಲ ತಾವು ಪ್ರಬಲ ರಾಷ್ಟ್ರದ ಪ್ರತಿನಿಧಿ ಎಂಬ ಭಾವನೆ ತಮ್ಮಲ್ಲಿ ತಾನಾಗಿಯೇ ಮೂಡಿತ್ತೆಂದು ಅವರು ಹೇಳಿದರು.

ಅಖಿಲ ಭಾರತ ವಿದ್ಯಾರ್ಥಿ ಕಾಂಗ್ರೆಸಿನ ಪರಿಷತ್ತು ಬೆಂಗಳೂರಿನಲ್ಲಿ ಜುಲೈ ೬, ೭, ೮ ಕ್ಕೆ ಸರ್ ಪುಟ್ಟಣಚೆಟ್ಟಿ ಭವನದಲ್ಲಿ ಕೂಡುವದು. ವಿದ್ಯಾರ್ಥಿ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ ಶವೀಂದ್ರ ವರ್ಮರು ಮತ್ತು ಕಾಂಗ್ರೆಸ ಧುರೀಣರು ಈ ಪರಿಷತ್ತಿಗೆ ಬರಲಿರುವರು.

ವಿಲೀನ ಹೊಂದಿದ ದಕ್ಷಿಣ ಸಂಸ್ಥಾನಗಳಲ್ಲಿ ಆದಾಯ ಕರದ ಬಗೆಗೆ ವಿವರಗಳನ್ನು ಸಂಗ್ರಹಿಸುವದಕ್ಕಾಗಿ ಆ ಶಾಖೆಯ ಅಧಿಕಾರಿಗಳಾದ ಪಿ. ವಿ. ಗೋಡಬೋಲೆಯವರು ಸಂಚರಿಸಲಿದ್ದಾರೆ.

## ವಿಜಾಪುರ

ಆರೋಗ್ಯ ಶಾಖೆಯ ಕೆಲ ಡಾಕ್ಟರರು ಹಾಗು ದಾಯಿಗಳು ತಮ್ಮ ಕೆಲಸ ಮುಗಿಸಿಕೊಂಡು ನಂದವಾಡಗಿ ರಸ್ತೆ ಮಾರ್ಗವಾಗಿ ಹುನಗುಂದಕ್ಕೆ ೨೦ ನೇ ತಾರೀಕು ಬರುತಿರುವಾಗ ಅವರ ಮೋಟರ ಮೇಲೆ ಕಾಡ್ಗಿಹಳ್ಳದ ಹತ್ತರಕ್ಕೆ ಬಾಂಬುಗಳು ಒಗೆಯಲ್ಪಟ್ಟವು. ಗಿಡದ ಮೇಲೆ ಕುಳಿತು ಈ ಬಾಂಬಗಳನ್ನು ಒಗೆಯಲಾಯಿತು ಸುದೈವದಿಂದ ಯಾರಿಗೂ ಗಾಯಗಳಾಗಲಿಲ್ಲ.

ಗುಳೇದಗುಡ್ಡ ಗ್ರುಪ್ ಶಿಕ್ಷಕ ಶಿಕ್ಷಿಕೆಯರು ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಗೆ ತಮ್ಮ ೧೦ ದಿನಗಳ ಸಂಬಳದಲ್ಲಿ ಮೊದಲನೆ ಕಂತನ್ನು ಈ ತಿಂಗಳ ಸಂಬಳದಲ್ಲಿ ಕೊಟ್ಟರು.

ಬಾಗಲಕೋಟೆ ಮುನಿಸಿಪಾಲಿಟಿಯ ಸಭೆ ಸೇರಿ ಅಲ್ಲಿಯ ಬಸವೇಶ್ವರ ಕಾಲೇಜಿಗೆ ೫೦೦೦ ರೂಪಾಯಿ ಕಾಣಿಕೆ ಕೊಡಬೇಕೆಂದು ಗೊತ್ತಾಯಿತು.

ಬಾಗಲಕೋಟೆ ಮುನಿಸಿಪಾಲಿಟಿಯ ಹಿಂದಿನ ಅಧ್ಯಕ್ಷ ಶ್ರೀ ಸ್ವಾಮಿರಾಯಾಚಾರ್ಯ ಕಿರಸೂರ ಇವರ ಭಾವಚಿತ್ರವನ್ನು ನಗರ ಸಭೆಯಲ್ಲಿಡಬೇಕೆಂದೂ ಅದಕ್ಕಾಗಿ ಶ್ರೀ ಹುಕ್ಕೇರಿಕರರನ್ನು ಕರೆಯಿಸಬೇಕೆಂದೂ ಗೊತ್ತಾಯಿತು.

ವಿಜಾಪುರ ಜಿಲ್ಹಾ ಮಧ್ಯವರ್ತಿ ಸಹಕಾರೀ ಬ್ಯಾಂಕಿನ ಬೆಳ್ಳಿ ಹಬ್ಬದ ಸಮಾರಂಭವು ಇದೇ ಜುಲೈ ೧೦ ನೇ ತಾರೀಕಿಗೆ ಜರುಗಲಿದ್ದು ಡಾ. ವಿ. ಕೆ. ಆರ್. ವಿ. ರಾವ ಅವರು ಅಧ್ಯಕ್ಷತೆ ವಹಿಸಲು ಒಪ್ಪಿಕೊಂಡಿದ್ದಾರೆ. ಡಾ. ಬಿ. ವಿ. ನಾರಾಯಣಸ್ವಾಮಿ ನಾಯಡುರವರು ಮುಖ್ಯ ವ್ಯಾಖ್ಯಾತರಾಗಿ ಬರುವರು.

ವಿಜಾಪುರ ಜಿಲ್ಹಾ ಗ್ರಾಮ ಸುಧಾರಣೆ ಸಮಿತಿಯ ಸಭೆ ಕಳೆದ ವಾರ ಕಲೆಕ್ಟರರ ಅಧ್ಯಕ್ಷತೆಯಲ್ಲಿ ಸೇರಿದ್ದಿತು. ಕಬ್ಬಿಣ ಮತ್ತು ತಗಡು ಹಂಚುವಿಕೆಯನ್ನು ಸರಿಯಾಗಿ ಮಾಡಲಿಲ್ಲೆಂದು ಸರಕಾರದವರು ವಿಜಾಪುರ ತಾಲೂಕ ಸಮಿತಿಯನ್ನು ರದ್ದುಪಡಿಸಿದ್ದರ ಸಂಬಂಧದಲ್ಲಿ ಜಿಲ್ಹಾ ಕಾಂಗ್ರೆಸ ಅಧ್ಯಕ್ಷ ದುಬೆ, ಕಾಂಗ್ರೆಸ ಎಂ. ಎಲ್. ಎ. ಸಜ್ಜನ, ಅಂಬಲಿ ಮೊದಲಾದವರು ವಿರೋಧ ವ್ಯಕ್ತಪಡಿಸಿ ಸರಕಾರದವರು ಈ ಬಗ್ಗೆ ಕ್ಷಮೆ ಕೋರಬೇಕೆಂದು ಮುಂತಾಗಿ ಆಗ್ರಹಪಟ್ಟು ಸಭೆ ಬಿಟ್ಟು ಎದ್ದು ಹೋದರು.

## ಬಳ್ಳಾರಿ

ಉರುವಕೊಂಡದ ಮಹಾಸ್ವಾಮಿಗಳಾದ ಶ್ರೀ ಕರಿಬಸವರಾಜೇಂದ್ರರು ಎಮ್ಮಿಗನೂರು ಏಕೀಕರಣ ಪರಿಷತ್ತಿಗೆ ಸಂದೇಶ ಕಳಿಸುತ್ತ, ನೀವೀಗ ಜೀವನ-ಮರಣದ ಹೋರಾಟದಲ್ಲಿರುವಿರಿ, ನಿರಾಶೆಗೊಳ್ಳದೆ ಇಮ್ಮಡಿ, ಮುಮ್ಮಡಿ ನಾಲ್ಮಡಿ ಸಾವಿರಮಡಿಹೆಚ್ಚು ಉತ್ಸಾಹದಿಂದ ಕನ್ನಡಿಗರ ನ್ಯಾಯ್ಯವಾದ ಜನ್ಮಸಿದ್ಧ ಹಕ್ಕಾದ ಭಾಗಗಳನ್ನು ಉಳಿಸಲು ಅಧಿಕೃತವಾಗಿ ನಿಶ್ಚಯ ಮಾಡಿರಿ ಎಂದಾ ಮುಂತಾಗಿ ಶುಭಾಶೀರ್ವಾದಗಳನ್ನು ಕೋರಿದ್ದಾರೆ.

ಎಮ್ಮಿಗನೂರು ಪರಿಷತ್ತಿನ ಉದ್ಘಾಟಕರೂ ಮೈಸೂರು ಘಟನಾ ಸಮಿತಿಯ ಅಧ್ಯಕ್ಷರೂ ಆಗಿರುವ ಶ್ರೀ ತುಮಕೂರು ಸುಬ್ರಹ್ಮಣ್ಯಂರು ಮೈಸೂರಿಗೆ ಮರಳಿದ ನಂತರ, ಆಲೂರು, ಅದವಾನಿ, ರಾಯದುರ್ಗ ಈ ಮೂರೂ ತಾಲೂಕುಗಳು ತಮ್ಮವೆಂದು ಆಂಧ್ರರು ಹೇಳುತಿರುವದು ಅನ್ಯಾಯವೆ, ಅವನ್ನು ಕರ್ನಾಟಕಕ್ಕೆ ತರುವ ಬಗ್ಗೆ ನೀವು ನಡೆಸಿದ ಪ್ರಯತ್ನಗಳಿಗೆ ನಾನು ನಿಮಗೆ ಕೊಂಚಮಟ್ಟಿಗೆ ಸಹಾಯ ಸಲ್ಲಿಸಿದ್ದೇನೆ. ಕೊನೆಗೆ ಸತ್ಯವೇ ಗೆಲ್ಲುವದೆಂದು ನನಗೆ ವಿಶ್ವಾಸವಿದೆ ಎಂದು ಮುಂತಾಗಿ ಸ್ವಾಗತ ಸಮಿತಿಯವರಿಗೆ ಬರೆದಿದ್ದಾರೆ.

ಕೊಟ್ಟೂರ ಹಾಯಸ್ಕೂಲ ವಿದ್ಯಾರ್ಥಿಗಳ ಹಾಸ್ಟೆಲ್ಲಿಗೆ ಅಲ್ಲಿನ ಶ್ರೀ ಭಂಗ್ಯಪ್ಪನವರು ಒಡ್ಡರ ಇವರು ೧೫೦೦ ರೂ. ಬೆಲೆ ಬಾಳುವ ತಮ್ಮ ಮನೆಯನ್ನು ದಾನವಾಗಿ ಕೊಟ್ಟಿದ್ದಾರೆ.

ಬಳ್ಳಾರಿ ವೀರಶೈವ ಕಾಲೇಜಿಗೆ ಇತ ಮನ್ನಣೆಯನ್ನು ಹಿಂತೆಗೆದುಕೊಂಡದ್ದಕ್ಕಾಗಿ ವಿಷಾದ ವ್ಯಕ್ತಪಡಿಸಿ ಸರಕಾರದವರು ಈ ನಿರ್ಣಯದ ಪುನರ್ವಿಚಾರ ಮಾಡಬೇಕೆಂದು ಬಳ್ಳಾರಿ ವಿದ್ಯಾರ್ಥಿ ಸಂಘದ ಪರವಾಗಿ ಬಿನ್ನವಿಸಿಕೊಳ್ಳಲಾಯಿತು. ಯಾವದೇ ಕಾರಣದಿಂದ ಈ ಕಾಲೇಜಿಗೆ ಮನ್ನಣೆ ಕೊಡುವದು ಶಕ್ಯವಿಲ್ಲದಿದ್ದರೆ ಸರಕಾರದವರೇ ಕಾಲೇಜನ್ನು ತೆರೆಯಬೇಕೆಂದು ಬಿನ್ನವಿಸಿಕೊಳ್ಳಲಾಯಿತು

## ಉತ್ತರ ಕನ್ನಡ

ಕಾಶೀಮ ರಜವಿಯವರು ತಮ್ಮ ಪ್ರಚಾರದಿಂದ ಹೈದರಾಬಾದ ಪ್ರಜೆಗಳಿಗೆ ದ್ರೋಹ ಬಗೆಯುತಿದ್ದಾರೆ. ಹಿಂದೀ ಮುಸಲ್ಮಾನರ ಪರವಾಗಿ ಮಾತಾಡಲು ಅವರಿಗೆ ಯಾವದೇ ಬಗೆಯ ಅಧಿಕಾರವಿಲ್ಲ. ಹಿಂದೀ ಮುಸಲ್ಮಾನರು ನೆಹರೂ ಮಂತ್ರಿಮಂಡಳಕ್ಕೆ ಬೆಂಬಲ ಕೊಡುವದರಲ್ಲಿ ಸಂಶಯವಿಲ್ಲ ಎಂದು ಮುಂತಾಗಿ ಉತ್ತರ ಕನ್ನಡ ಜಿಲ್ಹಾ ಮುಸ್ಲಿಂ ಲೀಗಿನ ಕಾರ್ಯದರ್ಶಿಗಳಾದ ಮುಲ್ಲಾರವರು ಅಭಿಪ್ರಾಯಪಟ್ಟಿದ್ದಾರೆ.

ಭಟ್ಕಳದ ತಾಂಜೀಮ ಕಮಿಟಿಯ ವಶದಲ್ಲಿದ್ದ ೩೦೦—೪೦೦ ಚೀಲ ಅಕ್ಕಿಯನ್ನು ಜಿಲ್ಹಾಧಿಕಾರಿಗಳ ಅಪ್ಪಣೆಯ ಮೇರೆಗೆ ವಶಪಡಿಸಿಕೊಂಡು ಯೋಗ್ಯ ದರದಿಂದ ಭಟಕಳದಲ್ಲಿ ಮಾರುವ ವ್ಯವಸ್ಥೆಯಾಗಿದೆಯೆಂದು ತಿಳಿಯುತ್ತದೆ.

ಈ ಸಲದ ಮ್ಯಾಟ್ರಿಕ ಪರೀಕ್ಷೆಯಲ್ಲಿ ಸ್ಪೃಹಣೀಯ ಯಶಸ್ಸುಪಡೆದಕು. ಉಪೋಣಿ, ಗೋಕರ್ಣ, ಕುಲಕರ್ಣಿ, ಹಾಗು ಕುಮಾರಿ ಇಂದುಮತಿ ಶಾನಭಾಗ ಅವರನ್ನು ಅಭಿನಂದಿಸಲು ಕಾರವಾರ ಹಿಂದೂ ಹಾಯಸ್ಕೂಲಿನಲ್ಲಿ ಸಭೆ ಸೇರಿತ್ತು. ಹಲವರು ಮಾತಾಡಿ ವಿದ್ಯಾರ್ಥಿ ವಿದ್ಯಾರ್ಥಿನಿಯರ ಯಶಸ್ಸನ್ನು ಕೊಂಡಾಡಿದರು.

ಬಂಕೀಕೊಡ್ಲದಲ್ಲಿ ಆಗೇರ ಸಮಾಜದ ಸಭೆ ಸೇರಿ ತಮಗಾಗಿ ಮಂಜೂರಾದ ಹತ್ತು ಗುಂಠೆ ಭೂಮಿಯನ್ನು ಬೇಗ ಕೊಡಿಸಬೇಕು ಮೊದಲಾಗಿ ಬಿನ್ನವಿಸಿಕೊಳ್ಳಲಾಯಿತು.

## ದಕ್ಷಿಣ ಕನ್ನಡ

ಉಡುಪಿ ಕಮ್ಯುನಿಸ್ಟ ಪಕ್ಷದ ಅಧ್ಯಕ್ಷರಾದ ಶ್ರೀ ರಾಘವನ್‌ರು ಮೈಸೂರು ಸೀಮೆಗೆ ತಾ. ೧೬ ಕ್ಕೆ ಹೋಗುವಾಗ ಉಡುಪಿ ಪೋಲಿಸ ಸ. ಇನಸ್ಪೆಕ್ಟರರು ಪೋಲೀಸರ ಸಹಾಯದಿಂದ ಅವರನ್ನು ಸೆರೆಹಿಡಿದರು. ಕೆಲ ಖಟ್ಲೆಗಳಿಗಾಗಿ ಇವರ ಮೇಲೆ ವಾರಂಟಿದ್ದು ಅದನ್ನು ತಪ್ಪಿಸುತ್ತ ಇವರು ಭೂಗತರಾಗಿದ್ದರು.

ಮದ್ಯಪಾನ ನಿರೋಧಕ್ಕಾಗಿ ಕಳ್ಳು ತೆಗೆದ ಕೆಲಸದಿಂದ ಮುಕ್ತರಾದ ಜನರಿಗಾಗಿ ಜಿಲ್ಹೆಯಲ್ಲಿ ೫೫ ಬೆಲ್ಲದ ಸಹಕಾರಿ ಸಂಘಗಳನ್ನು ಸರಕಾರದ ಪ್ರೋತ್ಸಾಹದಿಂದ ಸ್ಥಾಪಿಸಿದ್ದು ಈ ವರೆಗೆ ಅವುಗಳಲ್ಲಿ ೧೬ ಸಾವಿರ ರೂಪಾಯಿ ಬೆಲೆಯ ೮ ಲಕ್ಷ ಪೌಂಡು ಬೆಲ್ಲ ತಯಾರಾಗಿದೆ, ಈ ಸಂಘಗಳಲ್ಲಿ ೪೨೭೭ ಸದಸ್ಯರಿದ್ದು ಉಳಿತಾಯದ ಹುಂಡಿ ಪೆಟ್ಟಿಗೆಗಳ ಮೂಲಕ ಅವರು ಸುಮಾರು ೮ ಸಾವಿರ ರೂಪಾಯಿ ಉಳಿತಾಯ ಮಾಡಿಕೊಂಡಿದ್ದಾರೆ.

## ಕನ್ನಡ ಸಂಸ್ಥಾನ

ಶಿವಮೊಗ್ಗಿ ಜಿಲ್ಹಾ ಬೋರ್ಡಿನ ಆಯವ್ಯಯ ಸಭೆಯು ಹೊಸ ಅಧ್ಯಕ್ಷರಾದ ಶ್ರೀ. ಎ. ಆರ್ ಬದರೀನಾರಾಯಣರ ಅಧ್ಯಕ್ಷತೆಯಲ್ಲಿ ಸೇರಿ ಹೊಸ ವರ್ಷದ ಆಯವ್ಯಯಗಳನ್ನು ಸ್ವೀಕರಿಸಲಾಯಿತು. ೨೮೦೨೨೭ ಆಯವನ್ನು ನಿರೀಕ್ಷಿಸಲಾಗಿದ್ದು ೨೨೭೦೦೬ ರೂ. ವ್ಯಯದ ಅಂದಾಜ ಮಾಡಲಾಗಿದೆ. ಆರೋಗ್ಯಕ್ಕೆ ೧೦೩೫೦ ರೂ. ತೆಗೆದಿಡಲಾಗಿದೆ.

ಶಿವಮೊಗ್ಗಿಯ ಸಿ. ಕೆ. ಆ್ಯಂಡ ಎಂ. ಎಫ್ ಮೋಟರ ಸರ್ವಿಸ ಕಚೇರಿಯ ಬಾಗಿಲನ್ನು ಮುರಿದು ೧೦೦೦ ರೂ. ಹಾಗು ೮೦೦ ಗ್ಯಾಲನಗಳಷ್ಟು ಪೆಟ್ರೋಲ ಕೂಪನಗಳನ್ನು ಕಳವು ಮಾಡಿಕೊಂಡು ಹೋಗಿರುವರು.

ಕಮ್ಯುನಿಸ್ಟ ಕಾರ್ಯಕರ್ತರಾದ ಶ್ರೀ. ಶಾಂತಾರಾಮ ಪೈ ಇವರು ಚಿಕಮಗಳೂರಿಗೆ ಬಂದಾಗ ಪೋಲೀಸರು ಅವರನ್ನು ಹಿಡಿದು ಪೋಲೀಸ ಸ್ಟೇಶನದಲ್ಲಿಟ್ಟಿದ್ದರು. ಆದರೆ ಅವರು ತಪ್ಪಿಸಿಕೊಂಡು ಹೋಗಿದ್ದರು. ಅವರನ್ನು ಮತ್ತೆ ಹಿಡಿದಿರುವರು. ದಕ್ಷಿಣ ಕನ್ನಡ ಜಿಲ್ಹೆಯ ವಾರಂಟ ಇದೆ ಅವರ ಮೇಲೆ.

ಗಾಂಧೀಜಿ ಕೊಲೆಯ ನಂತರ ಕೊಲ್ಹಾಪುರ ಸಂಸ್ಥಾನದಲ್ಲಿ ಗಲಭೆಗಳು ನಡೆದಾಗ ಅಲ್ಲಿನ ಮಂತ್ರಿಗಳ ಮೇಲಿದ್ದ ಆರೋಪಗಳ ವಿಚಾರಣೆಗಾಗಿ ನೇಮಿಸಲ್ಪಟ್ಟ ವಿಶೇಷ ನ್ಯಾಯಾಲಯವು ಜುಲೈ ೫ ರಿಂದ ಕೆಲಸವನ್ನು ಪ್ರಾರಂಭಿಸುವದು. ನ್ಯಾ. ಕೊಯಾಜಿಯವರು ಈ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿರುವರು.

ಬಾಳೇಕದ್ರು ಶ್ರೀ ಮಠದಲ್ಲಿ ಇದೇ ೧೨-೧೩ ರಲ್ಲಿ ಶ್ರೀ ಶಂಕರಾಚಾರ್ಯರ ಯಂತ್ಯುತ್ಸವ ವಿಶೇಷ ರೀತಿಯಿಂದಜರುಗಿತು. ೫ ೧೨ಕ್ಕೆ ಶಾಂತಿ ಪಾಠದೊಂದಿಗೆ ವೇದ ವೇದಾಂತಾದಿ ಗ್ರಂಥಗಳಲ್ಲಿ ವಿದ್ಯಾರ್ಥಿಗಳ ಪರೀಕ್ಷೆ ವಿಶೇಷ ಪೂಜಾ ಸಂತರ್ಪಣಗಳು ನಡೆದವು ಅಪರಾಹ್ಣ ಧಾರ್ಮಿಕ ಸಭೆ ಶ್ರೀ ಸರಸ್ವತಿ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಜರುಗಿತು. ಬೇರೆ ಬೇರೆ ವಿಷಯಗಳ ಬಗ್ಗೆ ಮಹನೀಯರು ಭಾಷಣ ಮಾಡಿದರು ೧೩ ಕ್ಕೆ ಮತ್ತೆ ಸಭೆ ಸೇರಿ ವಿವಿಧ ವಿಷಯಗಳ ಬಗ್ಗೆ ಭಾಷಣ ನಡೆದವು. ವಿದ್ವಾಂಸರಿಗೆ ವಿದ್ಯಾರ್ಥಿಗಳಿಗೆ ಸಂಭಾವನ ವಿತರಣವಾದಬಳಿಕ ಮಂಗಳಾರತಿಯೊಡನೆ ಉತ್ಸವ ಸಾಂಗವಾಯಿತು.

# ಹಿಂದುಸ್ತಾನ

## ಮುಂಬಯಿ

ಮುಂಬಯಿ ಪ್ರಾಂತಿಕ ಕುರುಡ ಶಿಕ್ಷಣ ಪರಿಷತ್ತಿನ ೮ ನೇ ಅಧಿವೇಶನವು ತಾ. ೧೪ರ ಅಧ್ಯಕ್ಷತೆಯಲ್ಲಿ ತಾ ೧೮ ಕ್ಕೆ ಮುಂಬಯಿಯಲ್ಲಿ ಸೇರಿತ್ತು. ಇಡೀ ಹಿಂದುಸ್ತಾನದಲ್ಲಿರುವ ೨೦ ಲಕ್ಷ ಕುರುಡರಿಗಾಗಿ ೩೦ ಶಿಕ್ಷಣಕ ಮತ್ತು ೧೨ ಆಶ್ರಮ ಸಂಸ್ಥೆಗಳಿದ್ದು ಅವುಗಳಲ್ಲಿ ೧೨೦೦ ಕುರುಡರಿಗೆ ಮಾತ್ರ ಸ್ಥಳವಿದೆ. ಇಡೀ ಪ್ರಪಂಚದ ೧/೫ ಕುರುಡರು ಹಿಂದುಸ್ತಾನದಲ್ಲಿದ್ದಾರೆ. ಅಧಿವೇಶನ ಉದ್ಘಾಟಿಸುತ್ತ ಶ್ರೀ ಬಿ. ಜಿ. ಖೇರರು ಕುರುಡರಿಗೆ ಸರಕಾರದ ಸಂಪೂರ್ಣ ಸಹಾಯ ಸಹಕಾರ ದೊರೆವುದಾಗಿ ಆಶ್ವಾಸನ ವಿತ್ತರು.

ಶ್ರೀ. ಜಿ. ಡಿ. ಬಿರ್ಲಾರು ಬೃಹನ್ಮುಂಬಯಿ ಯಲ್ಲಿ ಉತ್ಪಾದಕ ಇಂಜನಿಯರಿಂಗ ಕಾಲೇಜ ಮತ್ತು ಶಿಕ್ಷಾ ಇಂಜನಿಯರಿಂಗ ಕಾಲೇಜ ತೆರೆಯಲು ೩೦ ಲಕ್ಷ ರೂ. ದೇಣಿಗೆ ಕೊಡುವ ರಾಗಿ ತಿಳಿಯುತ್ತದೆ.

ಮುಂಬಯಿ ಪ್ರಾಂತದಲ್ಲಿಯ ತಾಂತ್ರಿಕ ಮತ್ತು ವರ್ತಮಾನ ಶಾಲೆಗಳಲ್ಲಿ ಶಿಕ್ಷಣ ಹೊಂದುವ ಇತರ ಪ್ರಾಂತದ ವಿದ್ಯಾರ್ಥಿಗಳಿಗೆ ಈ ಮೊದಲು ಹೆಚ್ಚು ಫೀ ತೆಗೆದುಕೊಳ್ಳಲಾಗು ತ್ತಿತ್ತು. ಆದರೆ ಇತರ ಪ್ರಾಂತಗಳೊಡನೆ ಆದ ಚರ್ಚೆಯ ಪ್ರಕಾರ ಇನ್ನು ಮೇಲೆ ಈ ರೀತಿ ಹೆಚ್ಚು ಫೀ ತೆಗೆದುಕೊಳ್ಳುವದಿಲ್ಲವಾದರೂ ಪರ ಪ್ರಾಂತದಿಂದ ಬರುವ ವಿದ್ಯಾರ್ಥಿಗಳ ಪ್ರವೇ ಶದ ಬಗ್ಗೆ ಸಂಖ್ಯಾ ನಿರ್ಬಂಧ ಮಾತ್ರ ಹಾಗೇ ಇಡಲಾಗುವದೆಂದು ಮುಂಬಯಿ ಸರಕಾರದ ಪ್ರಕಟನೆ ಹೊರಟಿದೆ.

## ಮದ್ರಾಸ

ಆಂಧ್ರ ಪ್ರಾಂತಿಕ ಕಾಂಗ್ರೆಸ ಸಮಿತಿಯು ಅಖಿಲಭಾರತ ಕಾಂಗ್ರೆಸ ಸಮಿತಿಯ ಕಾರ್ಯ ದರ್ಶಿಗಳಿಗೆ ತಂತೀ ಕಳಿಸಿ ಕಾಂಗ್ರೆಸಿನ ಮುಂಬ ರುವ ಅಧಿವೇಶನವನ್ನು ಆಂಧ್ರ ದೇಶದಲ್ಲಿ ನೆರ ಯಿಸಬೇಕೆಂದು ಆಮಂತ್ರಣವಿತ್ತಿದೆಯೆಂದು ತಿಳಿಯುತ್ತದೆ.

ಮದ್ರಾಸ ಸರಕಾರದ ಕಂದಾಯ ಮಂತ್ರಿ ಕಲಾ ವೆಂಕಟರಾಯರು ತಿರುಚನಾಪಳ್ಳಿಯಲ್ಲಿ ಮಾತನಾಡುತ್ತ ಜಮೀನದಾರಿ ಪದ್ಧತಿಯ ನಿರ್ಮೂಲನದಿಂದ ಸರಕಾರಕ್ಕೆ ವಿಶೇಷ ವೆಚ್ಚ ಬಂದಿದೆಯೆಂದೂ ೧೨ ಕೋಟಿ ರೂಪಾಯಿಗ ಳನ್ನು ಜಮೀನುದಾರರಿಗೆ ಪರಿಹಾರ ರೂಪ ವಾಗಿ ಕೊಡಬೇಕಾಗಿದೆಯೆಂದೂ ಹೇಳಿ ದರು.

ಮದ್ರಾಸ ನಗರದಲ್ಲಿ ತಮಿಳೀ ಪ್ರಾದೇಶಿಕ ಭಾಷೆಯೆಂದಿದ್ದರೂ ನಗರದ ಶಾಲೆಗಳಲ್ಲಿ ತೆಲಗು, ಕನ್ನಡ, ಮಲಯಾಳಿ ಭಾಷೆಗಳನ್ನು ಶಿಕ್ಷಣದ ಮಾಧ್ಯಮವಾಗಿ ಇಡಲಾಗುವವು. ಈ ಬಗ್ಗೆ ವಿಶೇಷ ಆಕ್ಷೇಪ ಪಡೆವ ಕಾರಣವಿಲ್ಲೆಂದು ಶಿಕ್ಷಣ ಮಂತ್ರಿಗಳು ಪತ್ರಿಕಾ ಪ್ರತಿನಿಧಿಗಳಿಗೆ ತಿಳಿಸಿದರು.

## ಮಧ್ಯಪ್ರಾಂತ

ಮಧ್ಯಪ್ರಾಂತ ಸರಕಾರದವರು ತಮ್ಮ ಪ್ರಾಂ ತದಲ್ಲಿ ಸಿಂಧ ಹಾಗು ಪಶ್ಚಿಮ ಪಂಜಾಬದ ೩೦ ಸಾವಿರ ಮುಸ್ಲಿಮೇತರ ನಿರಾಶ್ರಿತರಿಗೆ ಆಶ್ರಯ ಕೊಟ್ಟಿದ್ದಾರೆ. ಅವರು ಸಿಂಧದ ಇನ್ನೂ ೨ ಲಕ್ಷ ನಿರಾಶ್ರಿತರಿಗೆ ಆಶ್ರಯಕೊಡಲಿದ್ದಾರೆ. ಹೈದ ರಾಬಾದ ಸಂಸ್ಥಾನದಿಂದ ೩ ಸಾವಿರ ನಿರಾಶ್ರಿ ತರು ಅಲ್ಲಿಗೆ ಹೋಗಿರುವರು.

ಮಧ್ಯಪ್ರಾಂತ–ಹೈದರಾಬಾದ ಗಡಿಯಲ್ಲಿ ಗ್ರಾಮರಕ್ಷಕರು ಮಾಡಿದ ಯಶಸ್ವಿ ಕಾರ್ಯವನ್ನು ಮಧ್ಯಪ್ರಾಂತ ಸರಕಾರದವರು ಮೆಚ್ಚಿ ಆ ದಲ ವನ್ನು ಹೆಚ್ಚು ಬಲಗೊಳಿಸಲು ಅಧಿಕಾರಿಗಳ ಸಂಖ್ಯೆಯನ್ನು ಬೆಳೆಸುತ್ತಲಿದ್ದಾರೆ.

ನಾಗಪೂರ ಪೋಲೀಸರು ಪಠಾಣ ಅಲಿ ಖಾನ ಎಂಬುವರನ್ನು ಬಂಧಿಸಿ ಸ್ಥಾನಬದ್ಧತೆ ಯಲ್ಲಿರಿಸಿರುವರು. ಇವರು ವೆರ್ಧಾದಲ್ಲಿ ನಿಜಾ ಮರಿಗಾಗಿ ಪ್ರಚಾರ ಕಾರ್ಯ ಮಾಡುತ್ತಿದ್ದ ರೆಂದೂ ನಾಗಪೂರ ಮುಸ್ಲಿಂರನ್ನು ನಿಜಾಮರ ಸೈನ್ಯದಲ್ಲಿಯೂ ರಜಾಕಾರರ ಸಂಸ್ಥೆಯಲ್ಲಿಯೂ ಸೇರುವಂತೆ ಮನವೊಲಿಸುತ್ತಿದ್ದರೆಂದೂ ಕಂಡು ಬಂದಿದೆಯಲ್ಲದೆ ಇದೇ ಬಗೆಯ ಅಪಾದನೆಯ ಮೇಲೆ ಛತ್ತೀಸಗಡ ಭಾಗದ ರಾಯಪೂರದಲ್ಲಿ ೧೦ ಮುಸ್ಲಿಂರನ್ನು ಬಂಧಿಸಲಾಗಿದೆ.

## ಹೊಸದಿಲ್ಲಿ

ಝೆಕೊಸ್ಲೋವಾಕ ಸರಕಾರದವರು, ಹಿಂ ದುಸ್ತಾನ ಸರಕಾರದವರೊಡನೆ ವಿಚಾರ ವಿನಿ ಮಯ ಮಾಡಿ ಅ. ಭಾ. ಸಂಪಾದಕ ಪರಿಷ ತ್ತಿನ ಸಲಹೆಯ ಮೇರೆಗೆ ಶ್ರೀ. ಬಾಲಾದೇಶ ಬಂಧು ಗುಪ್ತಾ ಮತ್ತು ಶ್ರೀ. ಜೋಚಿಂ ಅಲ್ವಾ ಇವರೀರ್ವರನ್ನು ಪ್ರಾಗದಲ್ಲಿ ಜುಲೈ ತಾ. ೧೦ರಿಂದ ೨೮ ವರೆಗೆ ನಡೆಯಲಿರುವ ಸೋಕಾಲ ಎಂಬ ಸಮಾರಂಭಕ್ಕೆ ಆಮಂತ್ರಣ ಕೊಟ್ಟರು ವರೆಂದು ತಿಳಿದು ಬಂದಿದೆ.

ಹಿಂದುಸ್ತಾನದಲ್ಲಿರುವ ನಿರಾಶ್ರಿತರ ಎಲ್ಲ ಶಿಬಿರಗಳನ್ನು ಈ ತಿಂಗಳಲ್ಲಿ ಆಯಾ ಪ್ರಾಂತ ಮತ್ತು ಸಂಸ್ಥಾನ ಸರಕಾರಗಳಿಗೆ ಒಪ್ಪಿಸಿಕೊಡ ಲಾಗುವದೆಂದು ತಿಳಿಯುತ್ತದೆ. ರಜಪುತಾನಾ, ಕಚ್ಛ ಕಾಠೇವಾಡ ಮತ್ತು ಮಧ್ಯ ಹಿಂದು ಸ್ತಾನ ಸಂಸ್ಥಾನಗಳಲ್ಲಿ ಹಾಗೂ ಮುಂಬಯಿ ಮಧ್ಯಪ್ರಾಂತ, ಸಂಯುಕ್ತಪ್ರಾಂತ ಮತ್ತು ದಿಲ್ಲಿ ಪ್ರಾಂತಗಳಲ್ಲಿ ಸಾಮಾನ್ಯವಾಗಿ ಈ ಶಿಬಿರ ಗಳಿರುತ್ತವೆ.

ಹಿಂದುಸ್ತಾನದ ೮ ಜನ ಪ್ರಮುಖ ಮುಸ ಲ್ಮಾನರು ಒಂದು ಪ್ರಕಟನೆ ಹೊರಡಿಸಿ ಇಡೀ ರಾಷ್ಟ್ರದ ಹಿತಕ್ಕಾಗಿ ಪಂ. ಜವಾಹರಲಾಲರ ಸೂಚನೆ ಒಪ್ಪಿ ಒಡಂಬಡಿಕೆ ಮಾಡಿಕೊಳ್ಳಿ ರೆಂದು ನಿಜಾಮರಿಗೆ ಬೇಡಿದ್ದಾರೆ.

ಇಂಗ್ಲಂಡದ ಅರಸರ ಪರವಾಗಿ ಲಾರ್ಡ ಮತ್ತು ಲೇಡಿ ಮೌಂಟಬ್ಯಾಟನ್ನರು ಹಿಂದು ಸ್ತಾನ ಸರಕಾರಿ ಭವನದಲ್ಲಿದ್ದ ೧೦೦ ಪೌಂಡು ಭಾರದ ೧೦ ಬಂಗಾರದ ವಸ್ತುಗಳನ್ನು ಹಿಂದು ಸ್ತಾನಕ್ಕೆ ತಾ. ೨೦ ರ ರಾತ್ರಿ ಒಪ್ಪಿಸಿದರು.

ಈಗ ಸಂಸ್ಥಾನಗಳ ಅಧೀನದಲ್ಲಿದ್ದ ಕೆಲವು ಬಂದರೆಗಳನ್ನು ಹಿಂದುಸ್ತಾನ ಸರಕಾರವು ತನ್ನ ಕಡೆಗೆ ತೆಗೆದುಕೊಂಡು ಅವುಗಳನ್ನು ಅಭಿ ವೃದ್ಧಿಗೊಳಿಸುವದೆಂದು ತಿಳಿಯುತ್ತದೆ. ದಕ್ಷಿಣ ದಲ್ಲಿದ್ದ ಕೊಚ್ಚಿ, ಸೌರಾಷ್ಟ್ರದಲ್ಲಿ ಭಾವನಗರ, ಪೋರಬಂದರ ಮತ್ತು ದೇಬಿ ಬಂದರ ಬಡೋ ದೆಯಲ್ಲಿಯ ಓಖಾ ವಶಪಡಿಸಿಕೊಳ್ಳಲಾಗು ವದು.

ಸಿಂಧ ಪ್ರಾಂತದ ಮುಸಲ್ಮಾನೇತರ ಪ್ರಜೆ ಗಳಲ್ಲಿ ಎರಡು ಮೂರಾಂಶ ಅಂದರೆ ೧೨ ಲಕ್ಷದಷ್ಟು ಜನರು ಹಿಂದುಸ್ತಾನಕ್ಕೆ ಕರೆತ ರಲ್ಪಟ್ಟಿದ್ದು ಇನ್ನು ೪ ಲಕ್ಷದಷ್ಟು ಜನ ಅಲ್ಲಿ ಉಳಿದಿರುವರೆಂದು ತಿಳಿಯುತ್ತದೆ. ಸಿಂಧ ದಲ್ಲಿರುವ ಹರಿಜನರವೊಂದು ಸಮಸ್ಯೆಯಾ ಗಿದ್ದು ಸಿಂಧ ಸರಕಾರವು ಅವರ ದನಕರುಗ ಳನ್ನು ಬಿಡುತ್ತಿಲ್ಲ. ಒಕ್ಕಲತನದಲ್ಲಿದ್ದ ಹರಿ ಜನರು ದನಕರ ಬಿಟ್ಟು ಬರಲು ಹಿಂದೆಗೆಯು ತಿದ್ದಾರೆ.

ಅರಸರ ಸಮ್ಮತಿಯ ಮೇರೆಗೆ ಹಿಂದುಸ್ತಾನ ಸರಕಾರದವರು ಸರ್ ಬಿ. ರಾಮರಾಯರನ್ನು ಅಮೇರಿಕೆಯಲ್ಲಿ ಹಿಂದೀ ರಾಯಭಾರಿಯೆಂದು ನೇಮಿಸಲು ನಿರ್ಧರಿಸಿದ್ದನ್ನು ಅಧಿಕೃತವಾಗಿ ಸಾರಲಾಗಿದೆ. ಸರ್ ಬಿ. ರಾಮರಾಯರು ಟೋಕಿಯೋದಲ್ಲಿ ಹಿಂದೀ ಸರಕಾರದ ಪ್ರತಿನಿಧಿ ಗಳಾಗಿದ್ದರು.

ಅ. ಹಿಂ. ವಿದ್ಯಾರ್ಥಿ ಕಾಂಗ್ರೆಸ್ಸಿನ ವಾರ್ಷಿ ಕ ಅಧಿವೇಶನವು ಜುಲೈ ೬, ೭, ೮ ತಾ. ಗೆ ಬೆಂಗಳೂರಲ್ಲಿ ಸೇರಲಿದೆ.

## ಓರಿಸಾ

ಡಾ. ಕೈಲಾಸನಾಥ ಕಟಜು ಅವರ ಬದಲು ಓರಿಸಾಕ್ಕೆ ಗವ್ಹರ್ನರರಾಗಿ ಬಂದ ಶ್ರೀ. ಅಸಫ ಅಲ್ಲಿ ಅವರ ಪ್ರತಿಜ್ಞಾ ವಿಧಿಯು ಕಟಕದಲ್ಲಿ ತಾ. ೨೧ರಂದು ಮುಂಜಾನೆ ಸರಕಾರೀ ಭವನದಲ್ಲಿ ಪಾಟಿನಾ ಹಾಯಕೋರ್ಟಿನ ಮುಖ್ಯ ನ್ಯಾಯಾ ಧೀಶರಾದ ಶ್ರೀ. ಪಿ. ಕೆ. ರೇ ಅವರ ನೇತೃತ್ವ ದಲ್ಲಿ ನಡೆದಿತು. ಈ ಸಮಾರಂಭಕ್ಕೆ ಓರಿಸಾದ ಮುಖ್ಯ ಮಂತ್ರಿ ಶ್ರೀ. ಹರೇಕೃಷ್ಣ ಮೆಹತಾ ಬರೂ ಇತರ ಮಂತ್ರಿಗಳೂ ಅನೇಕ ಅಧಿಕಾರಿ ಗಳೂ ಪ್ರತಿಷ್ಠಿತ ಸದ್ಗೃಹಸ್ಥರೂ ಬಂದಿ ದ್ದರು.

## ಬಿಹಾರ

ಮೊಂಘೀರದಲ್ಲಿಯ ಖಾಸಗೀ ಕಮ್ಮಾರರು ಶಸ್ತ್ರಾಸ್ತ್ರಗಳನ್ನು ತಯಾರಿಸುತ್ತಿದ್ದುದನ್ನು ಇನ್ನು ಮೇಲೆ ನಿಬಂಧಿಸಿ ಬಿಹಾರ ಸರಕಾರವೇ ಒಂದು ಕಾರಖಾನೆ ತೆಗೆದು ಅದರಲ್ಲಿ ಅವರಿಲ್ಲ ರನ್ನೂ ಸೇರಿಸಿಕೊಳ್ಳಲಾಗುವದೆಂದು ತಿಳಿಯು ತ್ತದೆ.

# ಮಹಾತ್ಮರ ಕೊಲೆಯ ಪ್ರಕರಣ

## ದೊಡ್ಡ ಒಳಸಂಚಿನ ವಿವರಗಳು

ಮಹಾತ್ಮಾ ಗಾಂಧಿಯವರ ಕೊಲೆ ಮತ್ತು ಆ ಬಗ್ಗೆ ಒಳಸಂಚು ನಡೆಸಿದ್ದಕ್ಕಾಗಿ ನಥು ರಾಮ ಗೋಡಸೆ ಮತ್ತು ಉಳಿದ ೭ ಜನರ ವಿಚಾರಣೆ ತಾ. ೨೨ ಕ್ಕೆ ದಿಲ್ಲಿಯ ಕೆಂಪು ಕೋಟೆಯಲ್ಲಿ ಪ್ರಾರಂಭವಾಗಿ ಆರೋಪಿಗಳ ಮೇಲಿನ ಆರೋಪ ಪತ್ರಿಕೆಯನ್ನು ನ್ಯಾಯಾ ಧೀಶ ಶ್ರೀ ಆತ್ಮಚರಣರು ಓದಿದರು.

ದಿಗಂಬರ ಬಡಗೆಯೆಂಬ ೯ ನೆ ಆರೋಪಿ ಮಾಫಿ ಸಾಕ್ಷಿದಾರನಾಗಲೊಪ್ಪಿದ್ದಾನೆ. ಉಳಿದ ವರು ಆರೋಪದ ನಿರಾಕರಣೆ ಮಾಡಿ ತಮ್ಮ ವಿಚಾರಣೆಯಾಗಬೇಕೆಂದರು.

ನಥುರಾಮ ಗೋಡಸೆ (೩೭ ವರ್ಷ) ನಾರಾ ಯಣ ಆಪಟೆ (೩೪) ವಿಷ್ಣು ಕರಕರೆ (೩೭) ಮದನಲಾಲ ಪಹವಾ (೨೦) ಗೋಪಾಲ ಗೋ ಡಸೆ (೨೭) ವಿನಾಯಕ ಸಾವರಕರ (೬೫) ದತ್ತಾತ್ರಯ ಪರಚುರೆ (೪೯) ಶಂಕರ ಕಿಷ್ಟಯ್ಯ ಈ ಎಂಟು ಜನರ ಮೇಲೆ ಮಾಫಿ ಸಾಕ್ಷಿದಾರ ಬಡಗೆ ಮತ್ತು ಗಂಗಾಧರ ದಂಡವತೆ, ಗಂಗಾ ಧರ ಜಾಧವ, ಸೂರ್ಯದೇವ ಶರ್ಮಾ ಇವರೊ ಡನೆ ಕೂಡಿಕೊಂಡು ಮಹಾತ್ಮರ ಕೊಲೆಯ ಬಗ್ಗೆ ಒಳಸಂಚು ನಡೆಸಿದ ಮತ್ತು ಸಾವರಕರ ರನ್ನು ಹೊರತು ಉಳಿದವರ ಮೇಲೆ ಶಸ್ತ್ರಾಸ್ತ್ರ ಕಾಯದೆಯ ವಿರುದ್ಧ ಬಂದೂಕು, ಬಾಂಬು, ಸ್ಫೋಟಕಗಳನ್ನು ಇಟ್ಟುಕೊಂಡ ಹಾಗು ಸಾಗಿಸಿಕೊಂಡು ಬಂದ ಆರೋಪಗಳು ಹಾಗು ಗೋಡಸೆಯ ಮೇಲೆ ಕೊಲೆಯ ಆರೋಪ ಹೊರಿಸಲ್ಪಟ್ಟಿತು.

### ಪ್ರಕರಣದ ಇತಿಹಾಸ

ಆರೋಪಿಗಳು ಆರೋಪಗಳ ನಿರಾಕರಣೆ ಮಾಡಿ ತಮ್ಮ ವಿಚಾರಣೆಯಾಗಬೇಕೆಂದು ಹೇಳಿಕೆ ಕೊಟ್ಟ; ಬಳಿಕ ಸರಕಾರಿ ವಕೀಲರಾದ ಸಿ. ಕೆ. ದಫ್ತರಿಯವರು ಪ್ರಕರಣದ ಇತಿಹಾಸ ವನ್ನು ಗೋಡಸೆಯ "ಅಗ್ರಣಿ" ಪತ್ರಿಕೆಯ ಅವತರಣಿಕೆಗಳೊಡನೆ ವಿವರಿಸಿದರು. ಅದರ ಸಾರ ಹೀಗಿದೆ:

೧೯೪೭ ಡಿಸೆಂಬರ ಕೊನೆಗೆ ಇಲ್ಲವೆ ೧೯೪೮ ಜನೇವರಿ ಮೊದಲನೆ ವಾರದಲ್ಲಿ ಈ ಒಳಸಂಚು ಮೈದಾಳಿತು. ಜನೆವರಿ ೯ ಕ್ಕೆ ಗೋಡಸೆಯ ಆಪ್ತ ಸ್ನೇಹಿತನಾದ ಕರಕರೆಯು ಪಂಜಾಬ ದಿಂದ ಬಂದಿದ್ದ ನಿರಾಶ್ರಿತ ಮದನಲಾಲನನ್ನು ಗೋಡಸೆಗೆ ಪುಣೆಯಲ್ಲಿ ಪರಿಚಯ ಮಾಡಿಕೊ ಟ್ಟನು. ಬಡಗೆಯ ಅಂಗಡಿಯಲ್ಲಿ ಅವರಿಬ್ಬರೂ ಕೈಬಾಂಬುಗಳನ್ನು ನೋಡಿಕೊಂಡು ಬಂದರು. ತಾ. ೧೪ ಕ್ಕೆ ಅವರು ಮುಂಬಯಿಯಲ್ಲಿ ಸಾವ ರಕರರನ್ನು ಕಂಡರು. ಕರಕರೆ, ಮದನ ಲಾಲರು ತಾ.೧೫ ಕ್ಕೆ ರೇಲಿನಿಂದಲೂ ತಾ.೧೭ಕ್ಕೆ ಆಪ್ಟೆ (ಗೋಡಸೆಯ "ಅಗ್ರಣಿ"ಯ ಮ್ಯಾನೇ ಜರ) ಮತ್ತು ಗೋಡಸೆಯವರು ವಿಮಾನದಿಂದ ಲೂ ಬಡಗೆ ಮತ್ತು ಶಂಕರ( ಬಡಗೆಯ ಸೇವಕ) ತಾ ೧೮ ಕ್ಕೆ ರೇಲಿನಿಂದಲೂ ದಿಲ್ಲಿಗೆ ತಲುಪಿ ಸುಳ್ಳು ಹೆಸರುಗಳಿಂದ ಅಲ್ಲಿ ಹಾಟಲಿನಲ್ಲಿಳಿ ದರು. ತಾ ೨೦ ಕ್ಕೆ ಅವರು ತಮ್ಮಲ್ಲಿದ್ದ ೫ ಕೈ ಬಾಂಬು, ೨ ಬಂದೂಕು, ೨ ಹುಸಿಬಾಂಬುಗ ಳನ್ನು ಹಂಚಿಕೊಂಡು ಗಾಂಧೀಜಿಯ ಪ್ರಾರ್ಥ ನೆಯ ಬಯಲಿಗೆ ಬಂದು ನಿಂತರು. ಮದನ ಲಾಲನು ಬಾಂಬು ಒಗೆದೊಡನೆ ಗೊಂದಲವೆದ್ದಾ ಗ ಉಳಿದವರು ಗಾಂಧೀಜಿಯ ಕಟಾಂಜನದಲ್ಲಿ ಬಾಂಬು ಮತ್ತು ಗೋಳಿಬಾರು ಮಾಡಬೇ ಕೆಂದು ಅವರೊಳಗೆ ಒಡಂಬಡಿಕೆಯಾಗಿದ್ದರೂ ಮದನಲಾಲನ ಬಾಂಬಿನಿಂದ ಸಾಕಷ್ಟು ಗೊಂದ ಲವೇಳದಿದ್ದುದರಿಂದಲೋ ಏನೊ ಅವರ ಕಾರ್ಯ ಫಲಿಸದೆ ಅವರು ದಿಲ್ಲಿಬಿಟ್ಟು ತೆರಳಿದರು. ಮದನಲಾಲನು ಬಂಧಿಸಲ್ಪಟ್ಟನು. ಈ ಕೆಲಸ ಕ್ಕಾಗಿ ನಥುರಾಮನ ತಮ್ಮ ಗೋಪಾಲ ಗೋಡ ಸೆಯೂ ಖಡಕಿ ಯಲ್ಲಿ ಸರಕಾರಿ ನೌಕರಿಯ ಲ್ಲಿದ್ದವನು ಸುಳ್ಳು ಹೇಳಿ ರಜೆ ಪಡೆದು ದಿಲ್ಲಿಗೆ ಬಂದಿದ್ದನು.

ಇದಾದ ಮೇಲೆ ತಾ ೨೭ಕ್ಕೆ ತಿರುಗಿ ಗೋಡಸೆ ಮತ್ತು ಆಪಟೆಯವರು ದಿಲ್ಲಿಗೆ ಬಂದು ಅಂದೇ ಗ್ವಾಲೇರಕ್ಕೆ ಹೋಗಿ ಅಲ್ಲಿ ಪರಚುರೆಯ ಸಹಾ ಯದಿಂದ ಪಿಸ್ತೂಲನ್ನು ಕೊಂಡುಕೊಂಡರು. ತಾ ೨೯ ಕ್ಕೆ ಅವರಿಬ್ಬರು ದಿಲ್ಲಿಗೆ ಬಂದಾಗ ಕರ ಕರೆಯೂ ಅಲ್ಲಿ ಸಿದ್ಧನಾಗಿದ್ದ. ಗೋಡಸೆ ತಾ. ೩೦ ಕ್ಕೆ ಗಾಂಧೀಜಿಯ ಮೇಲೆ ಮೂರುಬಾರಿ ಗುಂಡುಹಾರಿಸಿದಾಗ ಉಳಿದಿಬ್ಬರು ಬಿರ್ಲಾ ಭವನದಲ್ಲೋ ಅದರಸಮೀಪದಲ್ಲೋ ಇದ್ದರು. ಗೋಡಸೆಯ ಬಂಧನವಾದ ಮೇಲೆ ಉಳಿ ದವರು ಫೆಬ್ರುವರಿ ೨ ಕ್ಕೆ ಮುಂಬಯಿಗೆ ಮರ ಳಿದರು. ತಾ ೧೪ ಕ್ಕೆ ಇವರ ಬಂಧನವಾಯಿತು.

ಸಾವರಕರರನ್ನು ಉಳಿದ ಆರೋಪಿಗಳು ಗುರುಗಳೆಂದು ಪರಿಗಣಿಸುತಿದ್ದು, ಅವರ ತಿಳುವಳಿಕೆ ಮತ್ತು ಒಪ್ಪಿಗೆಯಿಂದಲೆ ಈ ಕೃತ ನಡೆಯಿತು.

ಈ ಕಥೆಯನ್ನು ಹೇಳುವಾಗ ಸರಕಾರಿ ವಕೀ ಲರು, ನಥುರಾಮ ಗೋಡಸೆ ತಾ. ೧೩ ಮತ್ತು ೧೪ ನೆ ತಾರೀಖಿನ ದಿನ ತನ್ನ ೨೦೦೦ ಮತ್ತು ೩೦೦೦ದ ವಿಮಾ ಪತ್ರಗಳನ್ನು ತನ್ನ ಹೆಂಡತಿಯ ಹೆಸರಿಗೆ ಬರೆದಿಟ್ಟದ್ದು, ಗೋಪಾಲ ಗೋಡಸೆ ಶ್ರೀಮತಿ ಮೋಡಾ ಎಂಬವಳ ಮುಂದೆ ತಾನು ಹೊರಡುವದನ್ನೂ ಸದ್ಯದಲ್ಲೇ ಆಗಬಹುದಾದ ಅದ್ಭುತ ಘಟನೆಯನ್ನು ನಿರೀಕ್ಷಿಸಬೇಕೆಂದು ಹೇಳಿದ್ದು "ಅಗ್ರಣಿ" ಯಲ್ಲಿ ಗೋಡಸೆ ಬರೆ ಯುತಿದ್ದ ಹಿಂಸಾತ್ಮಕ ಲೇಖಗಳು ಮೊದಲಾದ ಅನೇಕ ಸಂಗತಿಗಳನ್ನು ಅನುಷಂಗಿಕವಾಗಿ ಉಲ್ಲೇಖಿಸಿದರು.

## ಪ. ಬಂಗಾಲ

ಪಶ್ಚಿಮ ಬಂಗಾಲದ ಹೊಸ ಗವ್ಹರ್ನ ರರಾಗಿ ಬಂದ ಡಾ. ಕೈಲಾಸನಾಥ ಕಟಜು ಅವರ ಪ್ರತಿಜ್ಞಾ ವಿಧಿಯು ತಾ.೨೧ರ ಮುಂ ಜಾನೆ ಕಲಕತ್ತೆಯ ಸರಕಾರೀ ಭವನದಲ್ಲಿಯ ಸಿಂಹಾಸನ ಮಂದಿರದಲ್ಲಿ ನಡೆಯಿತು. ಈ ಸಮಾರಂಭಕ್ಕೆ ಪ. ಬಂಗಾಲದ ಮುಖ್ಯ ಮಂತ್ರಿಗಳೂ ಉಳಿದ ಎಲ್ಲ ಮಂತ್ರಿಗಳೂ ರಾಜಕೀಯ ಶಾಖೆಯ, ಸೈನ್ಯ ಶಾಖೆಯ ಹಾಗೂ ಇತರ ಶಾಖೆಗಳ ಉಚ್ಚ ಅಧಿಕಾರಿ ಗಳೂ ಪ್ರತಿಷ್ಠಿತ ನಾಗರಿಕರೂ ಆಗಮಿಸಿದ್ದರು. ನ್ಯಾಯ ಮೂರ್ತಿ ಅರ್. ಸಿ. ಮಿತ್ರರು ಪ್ರ ತಿಜ್ಞಾ ಸಮಾರಂಭ ನೆರವೇರಿಸಿದರು. ಡಾ. ಕಟಜೂ ಅವರು ಈ ಸಮಾರಂಭದ ನಂತರ ಮಾತನಾಡುತ್ತ ಬಂಗಾಲದ ಸೇವೆಯೇ ತಮ್ಮ ಧ್ಯೇಯವೆಂದೂ ತಮ್ಮನ್ನು ಪರಕೀಯನೆಂದು ತಿಳಿಯಕೂಡದೆಂದೂ ಅರಿಕೆಮಾಡಿಕೊಂಡರು.

ಹೈದರಾಬಾದ ಸಂಸ್ಥಾನದಲ್ಲಿಯ ೪೦ ಲಕ್ಷ ದಷ್ಟಿದ್ದ ದಲಿತ ವರ್ಗದವರು ಹೈದರಾಬಾದದ ಹಿಂದುಸ್ತಾನ ಸೇರ್ಪಡೆಗೆ ಬೆಂಬಲಕೊಡುವ ರೆಂದೂ ಅಲ್ಲಿಯ ಮುಸ್ಲಿಂರ ದಬ್ಬಾಳಿಕೆಯನ್ನು ಖಂಡಿಸುವರೆಂದೂ ಅ. ಭಾ. ದಲಿತವರ್ಗ ಮಹಾಮಂಡಲದ ಪ್ರಧಾನ ಕಾರ್ಯದರ್ಶಿ ಶ್ರೀ. ಪಿ. ಎಸ್. ರಾಜಭೋಜರು ಪ್ರಕಟನೆ ಹೊರ ಡಿಸಿದ್ದಾರೆ; ದಲಿತವರ್ಗದವರು ಎಂಥ ಕಠಿಣ ಪ್ರಸಂಗಬಂದರೂ ಸಂಸ್ಥಾನದಿಂದ ಹೊರಗೆ ಬರಬಾರದೆಂದೂ ಬಳಕ್ಕಾರರ ಧರ್ಮಾಂತರಕ್ಕೆ ಬಗ್ಗಬಾರದೆಂದೂ ಅವರು ಪ್ರಕಟನೆಯಲ್ಲಿ ಹೇಳಿದ್ದಾರೆ.

## ಆಝಾದ ಹೈದರಾಬಾದ ಸೈನ್ಯ

ಆಝಾದ ಹೈದರಾಬಾದ ಪ್ರಜಾ ಸೇನೆಯು ೧೯೪೭ ನವೆಂಬರದಲ್ಲಿ ರಚಿತವಾಗಿದ್ದು ಈಗ ೧೦ ಸಾವಿರ ಜನರನ್ನೊಳಗೊಂಡಿದೆ. ಇದರಲ್ಲಿ ಸುಶಿಕ್ಷಿತ ತರುಣರಿದ್ದು ಅನೇಕ ನಿವೃತ್ತ ಸೈನಿಕ ರಿದ್ದಾರೆ. ಹಿಂದ ಆಝಾದ ಸೈನ್ಯದ ರಾಜ ಗೋಪಾಲರು ಇದರ ಸ್ಥಾಪಕರಿರುವರು. ಈ ಸೈನ್ಯವು ನಿಜಾಮ ರಾಜ್ಯದಲ್ಲಿಯ ಅನೇಕ ಹಳ್ಳಿಗಳನ್ನು ಸ್ವತಂತ್ರವಾಗಿ ಮಾಡಿದ್ದು ಅಲ್ಲಿಯ ಆಡಳಿತೆಯನ್ನು ಸ್ಥಾನಿಕ ಪಂಚಾ ಯತರು ನೋಡಿಕೊಳ್ಳುತ್ತಿರುವರು. ಈ ಸೈನ್ಯವು ನಿಜಾಮರ ದಾಳಿಗಾರರ ವಿರುದ್ಧ ಕಾರ್ಯರಂಗಕ್ಕಿಳಿಯುವದು.

## ಕಾಂಗ್ರೆಸ ಸದಸ್ಯರ ಸಂಖ್ಯೆ

### ೧ ಕೋಟಿ ೫ ಲಕ್ಷ

ಕಳೆದ ವರ್ಷ ೫೫ ಲಕ್ಷ ಮಾತ್ರವಿದ್ದ ಕಾಂಗ್ರೆಸ ಸದಸ್ಯರ ಸಂಖ್ಯೆಯು ಈ ವರ್ಷ ೧ ಕೋಟಿ ೫ ಲಕ್ಷಕ್ಕೆ ಅಂದರೆ ಇಮ್ಮಡಿಯಷ್ಟು ಏರಿದೆ. ಕಾಂಗ್ರೆಸ ಸದಸ್ಯರನ್ನು ಮಾಡುವದ ರಲ್ಲಿ ಸಂಯುಕ್ತಪ್ರಾಂತವು ಪ್ರಥಮಸ್ಥಾನ ಪಡೆ ದಿದ್ದು ಅದೊಂದೇ ಪ್ರಾಂತದಲ್ಲಿ ೨೫ ಲಕ್ಷ ಸದಸ್ಯರಾಗಿದ್ದಾರೆ. ಆಂಧ್ರ ಮತ್ತು ಬಿಹಾರ ಗಳು ೨ ನೇ ಮತ್ತು ೩ ನೇ ಸ್ಥಾನ ಪಡೆದಿದ್ದು ಅವುಗಳಲ್ಲಿ ಅನುಕ್ರಮವಾಗಿ ೨೦,೮೨,೪೨೯ ಮತ್ತು ೨೦,೫೦,೨೭೧ ಸದಸ್ಯರಾಗಿದ್ದಾರೆ.

ಮೊಲದ ಮರಿಗಳು ಹುಟ್ಟುವಾಗ ಮತ್ತು ಹುಟ್ಟಿ ಹತ್ತು ದಿನಗಳ ವರೆಗೆ ಕುರುಡು, ಕಿವುಡು ಮತ್ತು ಚಲನಶಕ್ತಿ ಹೀನವಾಗಿರು ತ್ತವೆ.

# ಭಾಷಣಕಾರರಿಗೆ ಹಲವು ಸೂಚನೆಗಳು

[ ಲೇಖಕರು:— ನಾ. ಕಸ್ತೂರಿ, ಬಿ. ಎ., ಬಿ. ಎಲ್. ]

''ನಾನು ಈ ಸ್ಥಾನಕ್ಕೆ ತೀರ ಅನರ್ಹ; ನನಗೇನೂ ತಿಳಿಯದು; ನನಗಿಂತ ಅನುಭವಸ್ಥರೂ ಅಲೋಚನಾಪರರೂ ಆದ ಹಲವಾರು ಮಹನೀಯರು ಈ ಸಭೆಯಲ್ಲೇ ಇರುವಾಗ, ನಾನು ಇಲ್ಲಿ ನಿಂತು ಭಾಷಣ ಮಾಡುವುದು ಧಾಷ್ಟ್ರ್ಯವೇ ಸರಿ. ನನ್ನ ಭಾಷಣದಲ್ಲಿ ಏನಾದರೂ ಕಿಂಚಿತ್ತು ಸ್ವಾರಸ್ಯವಿದ್ದರೆ, ನೀವು ಅದನ್ನು ಹಂಸಕ್ಷೀರ ನ್ಯಾಯದಂತೆ... ...'' ಹೀಗೆಂದು ಗೋಳುಕರೆಯುವ ಭಾಷಣಕಾರನನ್ನು ಅಲ್ಲೇ ಅಗಲೇ ತಡೆದು, ''ಸ್ವಾಮಿ! ಸ್ವಾರಸ್ಯವಿದ್ದರೆ, ಗಿದ್ದರೆ, ಎಂಬ ಅನುಮಾನ ತಮಗೇ ಬಿದ್ದ ಮೇಲೆ, ನಮ್ಮ ಪಾಡು ನಾಯಿ ಪಾಡೇ ಸರಿ. ನಮಗೆ ಬೇರೆ ಕೆಲಸ ಕಾರ್ಯಗಳಿವೆ. ತಾವು ಹೊರಡಿ'' ಎಂದು ಒಂದೇ ಸಮ ಕೂಗುವುದೇ ಸರಿಯಾದ ಪ್ರತೀಕಾರ.

ತನ್ನಲ್ಲೇ ನಂಬಿಕೆ ಇಲ್ಲದವ, ನೂರಾರು ಮಂದಿಯನ್ನು ತನ್ನ ಮಾತಿನ ಮಾಟದಿಂದ, ಮರಳು ಮಾಡುವುದು ಹೇಗೆ ಸಾಧ್ಯ? ಭಾಷಣಕಾರರಿಗೆ ಮೊದಲು ಬೇಕಾದದ್ದು ಧೈರ್ಯ! ಅನಂತರ ಬೇಕಾದದ್ದೂ ಧೈರ್ಯ! ಕಡೆಗೆ ಬೇಕಾದದ್ದೂ ಧೈರ್ಯ! ತಿಳಿವಳಿಕೆ, ಅನುಭವ, ಶಿಕ್ಷಣ, ಸ್ವಾಸಂಗ,— ಇವು ಏನೂ ಇಲ್ಲದೆ, ಕೇವಲ ಎದೆಗಾರಿಕೆಯೊಂದರಿಂದಲೇ ಅನೇಕರು ಮೇಧಾವಿಗಳೆನಿಸಿಕೊಂಡಿದ್ದಾರೆ.

ಭಾಷಣಕ್ಕಾಗಿ, ಮಂಟಪವನ್ನೇರಿ ನಿಂತು ಸಭಿಕರ ಸಮೂಹವನ್ನು ಒಮ್ಮೆ ಓರೆಗಣ್ಣಿಂದ ನೋಡಿದೊಡನೆ, ಉತ್ತಮ ಭಾಷಣಕಾರನ ಮನದಲ್ಲಿ ಈ ರೀತಿಯ ಮಂಡಿಗೆ ಮೂಡಬೇಕು: ''ಈ ಜನ ಇಲ್ಲಿಗೆ, ತಮ್ಮ ಕೆಲಸ ಕಾರ್ಯಗಳನ್ನು ಒತ್ತಟ್ಟಿಗಿಟ್ಟು, ಬಂದು ಬೆವರುತ್ತಿರುವುದು ನನ್ನ ಅಮೂಲ್ಯ ಭಾಷಣ ಕೇಳುವುದಕ್ಕಾಗಿ! ನನ್ನ ಅಸಾಧಾರಣ ವ್ಯಕ್ತಿತ್ವವನ್ನು ಕಂಡು ಹಿಗ್ಗುವುದಕ್ಕಾಗಿ!... ಕಾರ್ಯದರ್ಶಿಯ ಒತ್ತಾಯದಿಂದಲ್ಲ; ಉಳಿದವರ ಮೇಲೆ ಕಣ್ಣೋಡಿಸುತ್ತ ಕೆಲ ಕಾಲ ಕೆಮ್ಮನೆ ಕುಳಿತಿರುವುದಕ್ಕಾಗಿ ಅಲ್ಲ; ಬೀದಿಯಲ್ಲಿ ಸಿಗಬಹುದಾದ ಸಾಲಗಾರರ ಕಾಟದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಅಲ್ಲ! ಇವರಿಗೆ ಯಾವ ವಿಷಯವಾಗಿಯೂ ಏನೂ ತಿಳಿಯದು. ಇವರಿಗೆ ನನ್ನ ವಾದವೇ ವೇದ; ನನ್ನ ಮೆದುಳೇ ಹದುಳ; ನನ್ನ ನಾಲಿಗೆಯೇ ನಾರಿಕೇಳ; ನಾನು ಕಾಣಿಸುವುದೇ ಕಾಂಚನಗಂಗಾ; ನನ್ನ ಮೂಗೇ ಕೈಮರ; ನಾನೇ ಇವರ ಟೆಂಪರರಿ ಬೃಹಸ್ಪತಿ''— ಹೀಗೆಂದು ದೃಢಸಂಕಲ್ಪ ಮಾಡಿಕೊಂಡ ಮೇಲೆ, ಭಾಷಣಕ್ಕಾಗಿ ಎದ್ದು ನಿಂತರೆ, ಅತನ ಬಾಯಿಂದ ಮಾತು ನಿರರ್ಗಳವಾಗಿ ತೈಲಧಾರೆಯಂತೆ ಹೊರಡುತ್ತದೆ, ಖಂಡಿತ!... ಭಾಷಣ ಶಾಸ್ತ್ರದ ಮೊದಲನೆಯ ಸೂತ್ರವೇ ಇದು. ಅಹಂಕಾರವೊಂದಿದ್ದರೆ, ಭಾಷಣ ಪ್ರಪಂಚದಲ್ಲಿ ಅಲಂಕಾರ ಪಡೆಯಬಹುದು. ಇದಕ್ಕೆ ಉದಾಹರಣೆಗಳು ಬೇಕೆ? ನಿಮ್ಮ ಊರಲ್ಲಿ ನಾಳೆ ನಡೆಯುವ ಸಭೆಯನ್ನೇ ಪರೀಕ್ಷಿಸಿರಿ. ಅಲ್ಲಿ, ವೇದಿಕೆಯ ಮೇಲೆ ನಿಂತು ಭಯಂಕರ ಭಾಷಣಗಳನ್ನು ಕರುಣಿಸುವ ವ್ಯಕ್ತಿಗಳನ್ನೇ ಕುರಿತು ವಿಚಾರ ಮಾಡಿ. ಅವರಿಗೆ ಯಾವ ಶಾಸ್ತ್ರದಲ್ಲಿ ಪರಿಶ್ರಮವಿಲ್ಲ? ಯಾವ ಸಯನ್ಸಿನಲ್ಲಿ ಶಿಕ್ಷಣ ಸಾಲದು? ಅವರು ಎಲ್ಲವನ್ನೂ ಬಲ್ಲರು. ಅವರ ಮಾತಿನ ಭರಾಟೆಯಲ್ಲಿ ಎಲ್ಲ ಶಾಸ್ತ್ರಗಳೂ ಎಲ್ಲ ಸಯನ್ಸುಗಳೂ ಸಿಕ್ಕಿ ನುಚ್ಚುನೂರಾಗುವವು. ವೈದ್ಯ, ಪ್ರಜಾಸತ್ತೆ, ಬಂಡವಾಳಶಾಹಿ, ವ್ಯಾಪಾರ, ಸ್ಟರ್ಲಿಂಗ ಬ್ಯಾಲನ್ಸ, ಪಾಲಸ್ತೀನ, ಟಿ. ವಿ. ಎ., ಶಿಕ್ಷಣ, ರಕ್ಷಣ, ಲಿಪಿ ಸಂಸ್ಕರಣ, ಕಾವ್ಯ ವಿಮರ್ಶೆ, ಧ್ವನಿವರ್ಧಕ ಯಂತ್ರ, ರಾಸಾಯನಿಕ ಗೊಬ್ಬರ, ಕೃತಕ ರಬ್ಬರ, ಸೋಯಾ ಕಾಳಿನ ಹಾಲು, ಗೋ ಸಂಪತ್ತು, ಮಾರ್ಷಲ್ ಯೋಜನೆಯ ಒಳ ಮರ್ಮ, ಬಿರ್ಲಾ ಯೋಜನೆಯ ಪಿತೂರಿ, ಅಮೇರಿಕನ್ ಚುನಾವಣೆಯ ಹುರಿಯಾಳುಗಳ ಗುಣಾವಗುಣ, ಭಾರತದ ಪೂರ್ವ ಇತಿಹಾಸದಲ್ಲಿ ಅಗಬೇಕಾದ ತಿದ್ದುಪಾಟುಗಳು, ಸ್ತ್ರೀ ಶಿಕ್ಷಣದ ವಿಶೇಷ ವಿನ್ಯಾಸಗಳು,. . . ಎಲ್ಲವನ್ನೂ ಅವರು ಬಲ್ಲರು! ಬಲ್ಲರು, ಎಂದಲ್ಲ. . . ಬಲ್ಲರು ಎಂಬ ಮಂಕುಬೂದಿಯನ್ನು ನಮ್ಮ ಮೆದುಳೊಳಗೆ ಎರಚಬಲ್ಲರು. ಇದು ಅವರಿಗೆ ಹೇಗೆ ಸಾಧ್ಯವಾಯಿತು? ಸಭೆಯಲ್ಲಿ ಕುಳಿತಿರುವ ನಮಗೆ ಏನೂ ತಿಳಿಯದು, ತಾವೇ ಸರ್ವಜ್ಞರು— ಎಂಬ ಧೈರ್ಯ ತಾಳಿದ್ದರಿಂದ.

ವಿದ್ಯಾ ದದಾತಿ ವಿನಯಂ; ಸರಿ. ಆದರೆ, ವಿನಯಂ ದದಾತಿ... ಏನನ್ನ? ನಾನು ಅನರ್ಹ; ನನಗಿಂತ ಕಿರಿಯರಿಲ್ಲ; ನಾನು ನಿಂತು ಮಾತನಾಡುವುದು ಧಾಷ್ಟ್ರ್ಯ! ಎಂಬ ವಿನಯಂ.. ದದಾತಿ... ''ವಿಲೇಜ್ ಸ್ಕೂಲ ಮಾಸ್ತರ ನೌಕರಿ.'' ಅಷ್ಟೆ!

ಇಂಥ ಧೈರ್ಯವಿರುವವರೆಲ್ಲ ಭಾಷಣಕಾರ ಕಸಬನ್ನು ಅವಲಂಬಿಸಬಹುದು. ವಯಸ್ಕರೆಲ್ಲರೂ ಮತದಾರರಾಗುವ ಯುಗ ಸಮೀಪಿಸಿರುವಾಗ, ಅವರಿಗೆಲ್ಲ ಜ್ಞಾನ ದಾನ ಮಾಡುವ ಮಹತ್ಸೇವೆ ಇಂಥ ಭಾಷಣಕಾರರ ತಂಡದಿಂದಲೇ ನಡೆಯಬೇಕಾಗಿದೆ. ಅದ್ದರಿಂದ, ಈ ಕಸಬನ್ನು ಅವಲಂಬಿಸುವ ಯುವಕ ಯುವತಿಯರಿಗೆ ಕೆಲವು ಸಲಹೆಗಳನ್ನು ಕೊಡುವುದು ಸೂಕ್ತ.

ನಮ್ಮ ದೇಶದ ಪರಿಸ್ಥಿತಿಯನ್ನೂ ನಮ್ಮ ಜನಗಳ ಸಂಸ್ಕೃತಿಯನ್ನೂ ಗಣನೆಗೆ ತೆಗೆದುಕೊಂಡರೆ, ಪ್ರತಿ ಭಾಷಣವೂ ಕಡೆಯ ಪಕ್ಷ ಎರಡು ತಾಸು ಹೊತ್ತು ನಡೆಯಲೇಬೇಕು. ಇಲ್ಲದಿದ್ದರೆ, ನಮಗೆ ಕಿವಿ ತುಂಬುವುದಿಲ್ಲ. ಸಾಮಾನ್ಯವಾಗಿ ಸಭೆಗಳು ಸಂಜೆ ೬ ಕ್ಕೆ ಎಂದು ಪ್ರಕಟವಾಗಿ ೭ ಕ್ಕೆ ಆರಂಭವಾಗುವುದರಿಂದ, ೯ ಕ್ಕೆ ಮುಂಚೆ ಜನಗಳನ್ನು ಮನೆಗಳಿಗೆ ರವಾನಿಸಿದರೆ ಅವರ ಮಕ್ಕಳು ಮಲಗಿ ನಿದ್ದೆ ಮಾಡಿರುವುದಿಲ್ಲ. ಅದ್ದರಿಂದ, ಅವುಗಳನ್ನು ಆಡಿಸಿ ನಿದ್ದೆ ಮಾಡಿಸುವ ಕೆಲಸ ಗಂಡಸಿನ ತಲೆ ಮೇಲೆ ಬೀಳುವುದು. ಇದನ್ನು ತಪ್ಪಿಸುವುದಕ್ಕಾಗಿಯೇ ಬಹು ಜನ ಸಭೆಗಳಿಗೆ ಬರುವುದು; ನೆನಪಿರಲಿ.

ಈಗಿನ ಕಾಲಕ್ಕೆ, ಪ್ರತಿ ಭಾಷಣದಲ್ಲೂ ಆರು ಭಾಗಗಳಿರಬೇಕಾದದ್ದು ಅತ್ಯಗತ್ಯ. (೧) ವರ್ಣನೆ. ೨೫ ನಿಮಿಷ. ಈಗಿನ ನಮ್ಮ ಸಮಾಜದ, ಅಥವಾ ದೇಶದ, ಕೋಮಿನ, ರಾಷ್ಟ್ರದ, ಜಗತ್ತಿನ ಶೋಚನೀಯ ಪರಿಸ್ಥಿತಿಯನ್ನು ಮೊದಲು ವಿವರಿಸಬೇಕಾದದ್ದು ಅವಶ್ಯಕ. ಇದಕ್ಕೆ ೨೫ ನಿಮಿಷಗಳ ಕಾಲ ವಿನಿಯೋಗಿಸಬಹುದು. ಏಕೆಂದರೆ, ೭ ಗಂಟೆಗೆ ಸಭೆ ಪ್ರಾರಂಭವಾದರೂ, ಮಾನ್ಯ ಮಹನೀಯರೂ ಸಭೆಯ ಸಂಚಾಲಕರೂ ೭–೨೦, ೭–೨೫ ರ ತನಕ ಬರುತ್ತಲೇ ಇರುತ್ತಾರೆ. ವಿವರಣೆಯಲ್ಲಿ ಕ್ರಾಂತಿ, ಅವನತಿ, ಪೈಶಾಚಿಕ, ಕರಾಳ, ಬಿಕ್ಕಟ್ಟು, ಕಾಳಸಂತೆ, ಕಾರ್ಕೋಟಕ ಮುಂತಾದ ಮಾತುಗಳ ಒಗ್ಗರಣೆ ತುಂಬ ಲಾಭದಾಯಕ. (೨) ಖಂಡನೆ. ೧೫ ನಿಮಿಷ. ಈಗಿನ ನಮ್ಮ ದುಃಸ್ಥಿತಿಗೆ ಯಾರು ಕಾರಣರು, ಎಂದು ಸೂಚಿಸಿ ಅವರನ್ನು ಸೂಚಿಸುವುದೇ ಮುಂದಿನ ಕೆಲಸ. ಇದಕ್ಕೆ ಬೇಕಾದದ್ದು ವಿವೇಚನೆ ಅಲ್ಲ; ಕ್ರೋಧ. ಇದನ್ನು ಅತಿ ತೀವ್ರವಾಗಿ ಬಿಸಿಬಿಸಿ ಮಾತುಗಳಿಂದ ಚಿಕ್ಕ ಚಿಕ್ಕ ವಾಕ್ಯಗಳಿಂದ ನೆರವೇರಿಸಬೇಕು. ಭಾಷಣಕಾರ ಅತ್ತಿತ್ತ ಹೆಜ್ಜೆ ಇಡುತ್ತ, ಸಭೆಯ ನಾನಾ ಭಾಗಗಳನ್ನು ದುರುದುರು ನೋಡುತ್ತ ಕಣ್ಣಲ್ಲಿ ಕೆಂಡ ಕಾರುವುದು, ಪರಿಣಾಮಕಾರಿ. ಭಾಷಣಕಾರ ಸಮಾಜವಾದಿಯಾದರೆ, ದುಃಸ್ಥಿತಿಗೆ ಕಾರಣರು ಕಾಂಗ್ರೆಸ್ಸಿನವರು; ಕನ್ನಡಿಗನಾದರೆ, ಮಹಾರಾಷ್ಟ್ರದವರು, ಸಮತಾವಾದಿಯಾದರೆ, ಬಂಡವಾಳಗಾರರು; ವೈದಿಕನಾದರೆ, ವಿಜ್ಞಾನ ಪ್ರೇಮಿಗಳು; ಸನಾತನಿಯಾದರೆ, ಶಿಕ್ಷಣ ಪರಿಷ್ಕರಣಕರ್ತರು; ಹಿಂದುಗಳಾದರೆ, ಮುಂದುಗಳು; ಮುಸಲ್ಮಾನನಾದರೆ, ಇತರ ಎಲ್ಲರೂ; ಕೂಲಿಗಾರನಾದರೆ, ಕಾರ್ಖಾನೆ ಮಾಲೀಕರು; ಪಟ್ಟಣಿಗನಾದರೆ, ಹಳ್ಳಿಯವರು; ಹಳ್ಳಿಯವನಾದರೆ, ಪಟ್ಟಣಿಗರು. ಮುಖ್ಯವಾಗಿ, ಈ ದೋಷಾರೋಪಣೆಯ ಮುಹೂರ್ತದಲ್ಲಿ ಮಾತು ಖಡಾಖಡಿಯಾಗಿರಬೇಕು. ಸುಡುನುಡಿಯ ಸುರಿಮಳೆ ಬೀಳುತ್ತಿರಬೇಕು. ಅಗ ಮಾತ್ರ ಸಭಿಕರು ಆಕಳಿಸದೆ ನಿದ್ದೆ ಹೋಗದೆ, ಪರಸ್ಪರ ಕುಶಲ ಪ್ರಶ್ನೆ ಮಾಡದೆ, ಕಿವಿಕೊಟ್ಟು ಕೇಳುತ್ತಿರುತ್ತಾರೆ. (೩) ಪ್ರಶ್ನೆ ೧೦ ನಿಮಿಷ. ಇಷ್ಟು ಪ್ರವಾಹ ಹರಿಸಿದ ಮೇಲೆ, ಮುಂದಿನದು, ಪ್ರಶ್ನೆ. ''ನಮ್ಮ ದುಃಸ್ಥಿತಿಯನ್ನು ನಾವು ಬಗೆಹರಿಸಬೇಡವೆ? ನಾವಲ್ಲದೆ ಮತ್ತೆ ಯಾರು ನಮ್ಮನ್ನು ಉದ್ಧರಿಸಬಲ್ಲರು? ಉದ್ಧರೇದಾತ್ಮನಾತ್ಮಾನಂ, ಎಂದು ಶ್ರೀಕೃಷ್ಣ ಪರಮಾತ್ಮ ಹೇಳಿಲ್ಲವೆ?'' ಇತ್ಯಾದಿ ಪ್ರಶ್ನೆಗಳನ್ನು ಪುಂಖಾನುಪುಂಖವಾಗಿ ಕೇಳಿ, ಸಭಿಕರನ್ನು ಮರುಳುಗೊಳಿಸಬೇಕು. ಆಗ ಅವರ ಬಗೆ ಕಪಡಿ, ನಿಲುವು ಸಡಲಿ, ಕಣ್ಣಿಗೆ ಮಂಜು ಮುಸುಕುತ್ತದೆ. (೪) ಭಾಷಣದ ೪ ನೆಯ ಭಾಗವೇ ಮಂಡನ. ೨೫ ನಿಮಿಷ ಕಾಲದ ಕಾರ್ಯಕ್ರಮ ಇದು. ಹದಿನೈದು ನಿಮಿಷಗಳ ಕಾಲ ಘಟಘಟನೆ ಕಿವಿ ಕಾದಿದ ನಂತರ, ದೇಶದ ದುಃಸ್ಥಿತಿಯನ್ನು ಸುಧಾರಿಸಲು ಏನೇನು ಕೆಲಸ ಕಾರ್ಯಗಳನ್ನು ಕೈಗೊಳ್ಳಬೇಕೆಂಬ ಸಲಹೆಗಳನ್ನು ಮುಂದಿಸುವ ಈ ಮಂಡನ ಭಾಗ, ಉಸಿರಿನ ಅಭಾವದಿಂದ, ಕೊಂಚ ನಿಧಾನವಾಗಿಯೇ ಸಾಗಬೇಕಾಗುತ್ತದೆ. ಸಭಿಕರಿಗೂ ಆಯಾಸವಾಗಿರುತ್ತದೆ. ಅದ್ದರಿಂದ, ಅವರೂ ಸಲಹೆಗಳನ್ನು ನಿಷ್ಪಕ್ಷಪಾತವಾಗಿ ವಿಮರ್ಶೆ ಮಾಡಲು ಅಶಕ್ತರು. ಇಂಥ ಸಮಯದಲ್ಲಿ ''ನಾವು ನಮ್ಮ ದೇಶದ ಸಂಪದಭಿವೃದ್ಧಿಗಾಗಿ ಇಡೀ ಜಗತ್ತಿನೊಂದಿಗೆ ಅದಷ್ಟು ಬೇಗ ಅದಷ್ಟು ಹೆಚ್ಚು ಪ್ರಮಾಣದ ನೌಕಾವ್ಯಾಪಾರ ಸೌಲಭ್ಯಗಳನ್ನು ಕಲ್ಪಿಸಿಕೊಳ್ಳಬೇಡವೆ?'' ಎಂದು ಮುಂತಾಗಿ ಸಭಿಕರನ್ನು ಕೇಳಿದರೆ, ಬೇಡವೆನ್ನಲು ಅವರಿಗೆ ತ್ರಾಣವಿರುವುದಿಲ್ಲ. ಎಂಥ ಗಡುಸಾದ ತೊಡಕುಗಳನ್ನೂ ನಾವು ಅವರಿಂದ ಆಗ ಇಲ್ಲವೆನ್ನಿಸಬಹುದು. ನಮ್ಮ ವಾದವೇ ಸರಿ, ಸೂಕ್ತ, ಸರ್ವಜನಪ್ರಿಯ, ಎಂದು ನಾವು ಶಹಬಾಸ್ ಪಡೆಯಬಹುದು.

ಪಡೆದ ತಕ್ಷಣವೇ, ಜಾಣನಾದ ಭಾಷಣಕಾರ ಐದನೆಯ ಭಾಗವಾದ (೫) ಸ್ತೋತ್ರಕ್ಕೆ ಇಳಿದುಬಿಡಬೇಕಾಗುತ್ತದೆ. ಮುಖಸ್ತುತಿಗೆ ಮೋಸಹೋಗದ ಮಹಾನುಭಾವರೇ ಇಲ್ಲ, ಈ ಲೋಕದಲ್ಲಿ. ಅದರೂ ಈ ಕೆಲಸಕ್ಕೆ ೧೫ ನಿಮಿಷಗಳನ್ನು ವ್ಯಯ ಮಾಡಿದರೆ ಸಾಕಾಗುತ್ತದೆ. ''ಹಿಮ್ಮಂತಹ ವಿಚಾರಶೀಲರಿಗೆ'' ''ತಮ್ಮಂತಹ ದೇಶಾಭಿಮಾನಿಗಳಿಗೆ'' ''ಪ್ರಪಂಚದ ಅತ್ಯಂತ ಬಲಿಷ್ಠ ಚಕ್ರಾಧಿಪತ್ಯವನ್ನೇ ತಪೋಬಲದಿಂದ ಉರುಳಿಸಿದ ನೀವು'' ಇತ್ಯಾದಿ ಘೋಷಣೆಯೇ ಈಗಿನ ಕಾಲಕ್ಕೆ ತಕ್ಕದ್ದು. ಈ ರೀತಿಯ ಸ್ತೋತ್ರದಿಂದ ಸ್ಫೂರ್ತಿಗೊಂಡ ಮಹಾಜನಗಳನ್ನು ಅದೇ ಹುಮ್ಮಸ್ಸಿನಿಂದಲೇ ಮನೆಗೆ ಕಳುಹಿಸುವುದು ತೀರ ಅಪಾಯ. ಅವರು ಕಾರ್ಯೋನ್ಮುಖರಾಗಿ ಕದನ ಕುತೂಹಲರಾಗಿ ಕಂಗಾಲಾಗಿ ಕೇಡನ್ನೇ ಉಂಟು ಮಾಡುವರು. ಅದ್ದರಿಂದ (೬) ಪುನಃ ಸುಮಾರು ೨೦ ನಿಮಿಷಗಳ ಕಾಲ ಅವರನ್ನು ಕೂರಿಸಿಕೊಂಡು, ನೀವು ಮುಂದಿಟ್ಟ ಸಲಹೆಗಳನ್ನು ಅವರಂತಹ ವೀರ ಸಾಹಸಿಗಳು ಅನುಮೋದಿಸಿದರೆ, ದೇಶದ ಭವಿಷ್ಯ ಹೇಗೆ ಹಾಲು ಜೇನುಗಳ ಹಳ್ಳ ತುಂಬಿ ರೂಪುಗೊಳ್ಳುವುದು, ಎಂಬ ಚಿತ್ರವನ್ನು ಕಾವ್ಯ ಶೈಲಿಯಲ್ಲಿ ವಿವರಿಸುವುದು ನ್ಯಾಯ. ಕಾವ್ಯ ಶೈಲಿ ಎಂದು ಏತಕ್ಕೆ ಹೇಳುತ್ತೇನೆ, ಅಂದರೆ, ಅದು ಸಭಿಕರನ್ನು ನಿದ್ದೆಯಲೋಕದ ಕನಸಿನ ಬೀದಿಗೆ ಸುಲಭದಲ್ಲಿ ಕರೆದೊಯ್ಯುವುದು. ಸಾಲುಸಾಲಾಗಿ ಆಕಳಿಕೆಗಳು ನಿಮ್ಮ ಕಣ್ಣು ಮುಂದೆ ಕಂಗೊಳಿಸುವುವು. ಅಧ್ಯಕ್ಷರೂ ಆಕಳಿಸಹತ್ತಿದ ಕೂಡಲೇ, ಭಾಷಣವನ್ನು ನಿಲ್ಲಿಸಬೇಕಾಗುತ್ತೆ. ಇಲ್ಲದಿದ್ದರೆ, ಮರುಕ್ಷಣದಲ್ಲೇ ನೀವೂ ಅವರನ್ನನುಸರಿಸುವ ಸಂಭವ ಬಹಳ.

# ವಾರದ ಭವಿಷ್ಯ

ಜ್ಯೋತಿಷಿ— ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಅಫೀಸ ಖಡೇಬಝಾರ, ಬೆಳಗಾವಿ.

## ಮೇಷ

ಪ್ರಕೃತಿಗೆ ತುಸು ಕ್ಲೇಶ. ಮಕ್ಕಳಲ್ಲಿ ಒಬ್ಬರಿಂದ ಸಂತಾಪದ ಭರದಲ್ಲಿ ಅಪಕೃತ್ಯವಾಗುವ ಸಂಭವ. ಸ್ತ್ರೀ ಮತ್ತು ಇತರ ಪ್ರಾಪಂಚಿಕ ಸುಖ ಒಳಿತು. ಉದ್ಯೋಗದಲ್ಲಿ ಪ್ರಗತಿಯೂ ಲಾಭವೂ ಸಾಧಾರಣವೇ. ಆದರೆ ಪ್ರತಿಷ್ಠೆ ನೆಟ್ಟಗೆ. ಒಂದು ಪಾರಮಾರ್ಥಿಕ ಧರ್ಮಕಾರ್ಯವಾಗುವ ಸಂಭವ. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಒಳ್ಳೆ ಗೆಲವು. ಬಂಧುಗಳಲ್ಲಿ ಉನ್ನತಿ. ಸಮೀಪದ ಆದರೆ ಪ್ರಸಿದ್ಧ ಸ್ಥಳಕ್ಕೆ ಪ್ರವಾಸ. ಭೆಟ್ಟಿ ಪತ್ರವ್ಯವಹಾರಗಳೂ ಉತ್ತಮ. ಅಶ್ವಿನಿಯ ಕೊನೆಯ ೨ ಮತ್ತು ಭರಣಿಯ ಮೊದಲಿನ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧, ೨, ೪, ಉತ್ತಮ.

## ವೃಷಭ

ಪ್ರಕೃತಿ ಎಲ್ಲರದೂ ನೆಟ್ಟಗೆ. ಮನೆಯಲ್ಲಿ ಎಲ್ಲರದೂ ಒಮ್ಮತ-ಮತ್ತು ಸುಖಸಮಾಧಾನ ಹೆಚ್ಚಿಸುವ ಸಲುವಾಗಿ ವಿಚಾರವಿನಿಮಯ. ಸಂತತಿಯಲ್ಲಿ ಒಬ್ಬರದು ವಿಶೇಷ ಉತ್ಕರ್ಷ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಎಲ್ಲವೂ ನೆಟ್ಟಗೆ. ಬಂಧುವರ್ಗದವರಿಂದ ತುಸು ದ್ವೇಷ. ವಾದದಲ್ಲಿ ಸ್ಪರ್ಧೆಯಲ್ಲಿ ಒಳ್ಳೆ ಯಶ. ಸಂಗ್ರಹದಲ್ಲಿ ವೃದ್ಧಿ. ಪ್ರಿಯ ಜನರ ಸಹವಾಸ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ನೆಟ್ಟಗೆ. ಕೃತ್ತಿಕೆಯ ಕೊನೆಯ ೨ ರೋಹಿಣಿಯ ಮೊದಲಿನ ೨ ಚರಣಗಳಿಗೆ ಹೆಚ್ಚು ನೆಟ್ಟಗೆ. ತಾ. ೨೯, ೩, ೪, ಇವು ಒಳ್ಳೆಯವು.

## ಮಿಥುನ

ಪ್ರಕೃತಿ ಉತ್ತಮ. ಆದರೆ ಹೆಂಡತಿಮಕ್ಕಳ ಆರೋಗ್ಯ ಕೆಡುವ ಸಂಭವ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಸಾಧಾರಣವೇ. ಆದರೆ ಲಾಭ ನೆಟ್ಟಗೆ. ಒಂದು ಸಾಹಸದ ಕೆಲಸ ಮಾಡಿದ್ದರ ಮೂಲಕ ಎಲ್ಲರಿಂದಲೂ ಪ್ರಶಂಸೆ. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಸಾಧಾರಣ. ಮಿತ್ರಸುಖ ಉತ್ತಮ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ನೆಟ್ಟಗೆ. ಆರ್ದ್ರೆಯ ಕೊನೆಯ ೨ ಮತ್ತು ಪುನರ್ವಸುವಿನ ಮೊದಲಿನ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೯, ೩೦, ೧, ೨, ಇವು ನೆಟ್ಟಗೆ.

## ಕರ್ಕ

ಪ್ರಕೃತಿಗೆ ತುಸು ಕ್ಲೇಶ. ಹೆಂಡತಿಯದೂ ಆರೋಗ್ಯ ಹಾಗೆಹಾಗೇ. ಉಳಿದ ವಿಷಯದಲ್ಲಿ ಪ್ರಾಪಂಚಿಕ ಸುಖ ನೆಟ್ಟಗೆ ಮತ್ತು ಮಕ್ಕಳ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಪ್ರತಿಷ್ಠೆಯಲ್ಲಿ ಹೆಚ್ಚಳವಿದ್ದರೂ ಲಾಭ ಕಡಮೆ. ಆದರೆ ವೆಚ್ಚ ತಲೆ ಭಾರದ್ದು. ಊರ ಉಡಾಳರಿಂದ ಇಲ್ಲದ ನಿಂದೆ ಮತ್ತು ಕುಚೇಷ್ಟೆ. ಆಪ್ತರಿಂದಲೂ ನೆರೆಹೊರೆಯವರಿಂದಲೂ ಇಲ್ಲದ ಪದಾರ್ಥ ಕೇಳುವಿಕೆ. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಒಳ್ಳೆ ಅನುಕೂಲತೆ. ಮೈತ್ರಿಯಲ್ಲಿ ವಿರೋಧ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಉತ್ತಮ. ಪುಷ್ಯಾದ ಕೊನೆಯ ೨ ಆಶ್ಲೇಷಾದ ಮೊದಲಿನ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೯, ೩೦, ೨, ೩ ಒಳ್ಳೆಯವು.

## ಸಿಂಹ

ಪ್ರಕೃತಿಯೂ ಪ್ರಾಪಂಚಿಕ ಸುಖವೂ ಒಳ್ಳೆ ಚೆನ್ನಾಗಿದ್ದರೂ ಹೆಂಡತಿಗೆ ತುಸು ಕ್ಲೇಶ. ಮಕ್ಕಳಿಂದ ಕಿಂಚಿತ್ ವಿರುದ್ಧ ವರ್ತನೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಎಲ್ಲ ಉತ್ತಮ. ಆದರೆ ವೆಚ್ಚ ಹೆಚ್ಚು. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಸಾಧಾರಣ. ಸ್ಥಾವರದಲ್ಲಿ ತುಸು ಹೆಚ್ಚಳ. ಮಿತ್ರಸುಖ ಉತ್ತಮ. ಪ್ರವಾಸಾದಿಕೆಲಸಗಳು ಹಿತಾವಹ. ಮಘಾದ ಕೊನೆಯ ೨ ಪೂರ್ವಾದ ಮೊದಲಿನ ೨ ಚರಣಗಳಿಗೆ ಹೆಚ್ಚು ತೊಂದರೆ ತಾ. ೨೮, ೧, ೨ ಇವುಗಳು ನೆಟ್ಟಗೆ.

## ಕನ್ಯಾ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಮಕ್ಕಳಿಂದ ಅಪ್ರಿಯ ವರ್ತನವಾಗಿ ಪ್ರಾಪಂಚಿಕ ಸುಖದಲ್ಲಿ ತುಸು ವ್ಯತ್ಯಾಸವಾಗುವ ಸಂಭವ. ಸ್ಥಾವರದಲ್ಲಿ ಒಂದು ಪ್ರತಿಕೂಲ ಘಟನೆ ಸಂಭವಿಸಿ ಮನಸ್ಸಿಗೆ ತಳಮಳ. ಮಿತ್ರತ್ವದಲ್ಲಿ ದೊಡ್ಡ ವಿರೋಧ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಬಹಳ ಉತ್ತಮ. ಲಾಭ ಮಾತ್ರ ಬಹಳ ಕಡಮೆ ಮತ್ತು ವೆಚ್ಚವೂ ಹೆಚ್ಚು. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಪ್ರತಿಕೂಲತೆ. ಪ್ರವಾಸಾದಿ ಕೆಲಸಗಳು ಸಾಧಾರಣ ನೆಟ್ಟಗೆ. ಉತ್ತರಾದ ಕೊನೆಯ ೨ ಮತ್ತು ಹಸ್ತಾದ ಮೊದಲಿನ ೨ ಚರಣಗಳಿಗೆ ತ್ರಾಸ ಕಡಮೆ. ತಾ. ೨೯, ೩೦, ೪ ಇವುಗಳು ಒಳ್ಳೆಯವು.

( ೧೬ ನೇ ಪುಟ ನೋಡಿರಿ )

# ಪುಸ್ತಕ ಪರಿಚಯ

(ನಮಗೆ ಬಂದ ಎಲ್ಲ ಪುಸ್ತಕಗಳನ್ನು ಸಾದರದಿಂದ ಸ್ವೀಕರಿಸಿದ ಉಲ್ಲೇಖ ಮಾಡುವೆವಾದರೂ ಆ ಎಲ್ಲವುಗಳ ವಿಮರ್ಶೆ ಮಾಡಿಯೇ ತೀರುವೆವೆಂದು ಗ್ರಹಿಸಕೂಡದಾಗಿ ಈ ಮೂಲಕ ತಿಳಿಸಬಯಸುತ್ತೇವೆ. —ಸಂ.)

### ಸಂಘಟನೆಯ ಗುಟ್ಟು

ಲೇಖಕರು, ಡಾ. ನಾ. ಸು. ಹರ್ಡೀಕರ. ಪ್ರಕಾಶಕರು, ಕಂ. ಬಾ. ಮುನಗೋಳಿ, ದಾಜೀಬಾ ಪೇಟೆ, ಹುಬ್ಬಳ್ಳಿ. ಪುಟಗಳು ೬೨. ಬೆಲೆ ೧೨ ಆಣೆ.

ಸಮಾಜಕ್ಕಾಗಿ ಒಂದು ಕಾರ್ಯವನ್ನು ಮಾಡಬೇಕೆಂಬ ಹಂಬಲಿಕೆ ಉಂಟಾದವರಿಗೆಲ್ಲ ಅದನ್ನು ಈಡೇರಿಸಲು ಒಂದು ಸಂಸ್ಥೆಯ ಆಶ್ರಯ ಹೊಂದಬೇಕೆಂಬ ವಿಚಾರ ಬರುವದು ಸಹಜ. ಕೈಅಳವಿಗೆ ಅಂತಹ ಸಂಸ್ಥೆ ಸಿಕ್ಕದಿದ್ದರೆ ತಾನೇ ಒಂದನ್ನು ಕಟ್ಟಿ ಅದರ ಮುಖಾಂತರವೇ ಬಲ ಶೇಖರಿಸಿ ಮಾಡುವ ಕೆಲಸ ಮಾಡುವಾ ಎಂದೂ ತೋರುತ್ತದೆ. ಅಂತಹರಿಗೆ ಸಂಘಟನೆಯ ಗುಟ್ಟು ಎಂಬ ಈ ಪುಸ್ತಕವು ಅತ್ಯಂತ ಉಪಯುಕ್ತವಾದ ಮಾರ್ಗದರ್ಶಕವಾಗಿದೆ. ಇದನ್ನು ಬರೆದ ಡಾ. ಹರ್ಡೀಕರರು ಆಯುಷ್ಯವೆಲ್ಲ ಸೇವೆಯಲ್ಲಿ ಸಂಘಟನೆಯಲ್ಲಿ ಕಳೆದವರು. ಇದರಲ್ಲಿ ಹೇಳಿದ ಮಾತುಗಳಿಗೆಲ್ಲ ಲೇಖಕರ ಸ್ವಾನುಭವದ ಬಲವಿದೆ. ಭಾರತದ ಸ್ವಾತಂತ್ರ್ಯದ ಹೋರಾಟದಲ್ಲಿ ಹಿಂದುಸ್ತಾನಿ ಸೇವಾದಲವು ಮಾಡಿದ ಕಾರ್ಯವು ಸಣ್ಣದಲ್ಲ. ಅದರ ಜನಕರಾದ ಡಾ. ಹರ್ಡೀಕರರೇ ಅಧಿಕಾರಯುಕ್ತವಾಗಿ ಸಂಘಟನೆಯ ಗುಟ್ಟು ಕೊಡಬಲ್ಲರು. ಇದರಲ್ಲಿ ಎರಡು ಭಾಗಗಳಿದ್ದು ೧ ನೆಯದರಲ್ಲಿ ಸಂಸ್ಥೆಯನ್ನು ಹೇಗೆ ಕಟ್ಟಬೇಕೆಂಬುದರ ಬಗ್ಗೆ ವಿವರದ ಚರ್ಚೆಯಿದೆ. ೨ ನೆಯ ಭಾಗದಲ್ಲಿ ಕಾರ್ಯಕರ್ತರಿಗೆ ಅವಶ್ಯಕವಾಗಿರುವ ಸಲಹೆಗಳೆಯಲ್ಲದೆ ಜನಸಮುದಾಯವನ್ನು ಒಮ್ಮೆ ತಮ್ಮತ್ತ ಒಲಿಸಿಕೊಂಡ ಮೇಲೆ ಅವರನ್ನು ಹೇಗೆ ನಿಯಂತ್ರಿಸಿ ಸರಿಯಾಗಿ ನಡೆಯಿಸಿಕೊಂಡು ಹೋಗಬೇಕೆಂಬ ಬಗ್ಗೆ ತಕ್ಕ ಸೂಚನೆಗಳನ್ನು ಕೊಡಲಾಗಿದೆ.

### ಚಂದಮಾಮ
### (ಮಕ್ಕಳ ಮಾಸಪತ್ರಿಕೆ)

ಸಂಪಾದಕರು, ಮುದ್ರಕರು ಮತ್ತು ಪ್ರಕಾಶಕರು ಶ್ರೀ ಬಿ. ನಾಗಿರೆಡ್ಡಿ, ೩೭, ಅಚಾರಪ್ಪನ ಬೀದಿ, ಮದ್ರಾಸ ೧. ಪುಟಗಳು ೪೬. ಬೆಲೆ ಬಿಡಿಸಂಚಿಕೆಗೆ ೬ ಆಣೆ. ವಾರ್ಷಿಕ ಚಂದಾ ೫ ರೂ.

ಚಂದಮಾಮ ಎಂಬ ಮಕ್ಕಳ ಮಾಸಪತ್ರಿಕೆಯು ಮದ್ರಾಸದಿಂದ ಹೊರಟಿದ್ದು ನಮ್ಮ ಕೈಯಲ್ಲಿರುವದು ೧ ನೆಯ ಸಂಪುಟದ ೧ ನೆಯ ಸಂಚಿಕೆ. ಮಕ್ಕಳಿಗೆ ಮೆಚ್ಚುಗೆಯಾಗುವಂತಹ ಬಣ್ಣ ಬಣ್ಣದ ಅನೇಕ ಚಿತ್ರಗಳು ಪತ್ರಿಕೆಯ ತುಂಬೆಲ್ಲ ಉಂಟು. ರುಚಿರುಚಿಯಾದ ಕತೆಗಳು, ಚಿಕ್ಕಚಿಕ್ಕ ಕವಿತೆಗಳು, ಒಗಟುಗಳು, ಹುಡುಗಿಯರಿಗಾಗಿ ರಂಗವಲ್ಲಿಯ ಸಚಿತ್ರ ವಿಭಾಗ, ಕೈಬೆರಳುಗಳನ್ನು ಒಂದೊಂದು ಬಗೆಯಾಗಿ ಜೋಡಿಸಿ ದೀಪದ ಬೆಳಕಿಗೆ ಹಿಡಿದು ಗೋಡೆಯ ಮೇಲೆ ಒಂದೊಂದು ಚಿತ್ರದ ನೆರಳು ಕೆಡಹುವ ಬಗೆ, ಇವೆಲ್ಲ ಮಕ್ಕಳಿಗೆ ಬೇಕಾದಷ್ಟು. ಬಳಸಿದ ಚಿತ್ರಗಳು ಬಣ್ಣಗಳು ಇವುಗಳ ಲೆಕ್ಕಾಚಾರ ಮಾಡಿದರೆ ಈ ಪತ್ರಿಕೆಗಿಟ್ಟ ೬ ಆಣೆ ಬೆಲೆ ತೀರ ಕಡಮೆಯೇ ಸರಿ. ಮೊದಲ ಸಂಚಿಕೆಯಂತೆಯೇ ಮುಂದಿನ ಸಂಚಿಕೆಗಳೂ ಇನ್ನೂ ಸೊಗಸಾಗಿ ಪ್ರಕಟವಾಗುವವೆಂದು ನಾವು ನಿರೀಕ್ಷಿಸುತ್ತೇವೆ. ಹಾಗಾದಲ್ಲಿ ಮಕ್ಕಳ ರಂಜನೆಗೋಸುಗ ಮನೆಮನೆಗೂ ಇರಬೇಕಾದ ವಸ್ತುವಿದು.

### ಫಾರಸೀ ಕಾಗದಪತ್ರಗಳು

ಸಂಗ್ರಾಹಕರು ಮತ್ತು ಸಂಶೋಧಕರು, ದೊಡ್ಡಭಾವೆಪ್ಪ ಚೆನ್ನಬಸಪ್ಪ ಮುದಿಗಿ, ಬೈಲಹೊಂಗಲ. ಪ್ರಕಾಶಕರು, ಕಲ್ಲೂರ ರಾಯನಗೌಡರು. ಕಿತ್ತೂರ ಚೆನ್ನಮ್ಮ ರಾಣಿ ಇತಿಹಾಸ ಮಂಡಲ ಬೈಲಹೊಂಗಲ. ಪುಟಗಳು, ೪೫. ಬೆಲೆ, ೨॥ ರೂ.

ಇದು ಕಿತ್ತೂರ ಚೆನ್ನಮ್ಮ ರಾಣಿ ಇತಿಹಾಸ ಮಂಡಲದ ೩ ನೆಯ ಪ್ರಕಟನೆ. ಇಲ್ಲಿ ಪ್ರಕಟವಾದ ಕಾಗದಪತ್ರಗಳನ್ನು ಕನ್ನಡ ಮತ್ತು ಇಂಗ್ಲೀಷ ಭಾಷಾಂತರಗಳೊಂದಿಗೆ ಪ್ರಕಟಿಸಲಾಗಿದೆ. ಇದರಿಂದ ಫಾರಸೀ ಭಾಷೆ ಅರಿಯದವರಿಗೆ ಬಹಳ ಅನುಕೂಲವಾಗಿರುವದಲ್ಲದೆ ಇತಿಹಾಸದ ಅಭ್ಯಾಸದಲ್ಲಿ ಆಸಕ್ತರಾದವರಿಗೆ ಒಳ್ಳೆ ಸಹಾಯಕವಾಗಿದೆ. ಶ್ರೀ ಹಾಲಬಾವಿ ವೀರಭದ್ರಪ್ಪನವರ ಮುನ್ನುಡಿ ಗಮನಾರ್ಹವಾಗಿದೆ. ಕಾಗದಪತ್ರಗಳ ಮೂಲವನ್ನೆ ಪಡಿಯಚ್ಚು ಮಾಡಿಸಿ ಅಂದವಾಗಿ ಮುದ್ರಿಸಿ ಪ್ರಕಟಿಸಿದ್ದು ಪುಸ್ತಕದ ಮೌಲ್ಯವನ್ನು ಇನ್ನೂ ಹೆಚ್ಚಿಸಿದೆ. ಅರ್ವಾಚೀನ ಐತಿಹಾಸಿಕ ಸಂಶೋಧನೆಯಲ್ಲಿ ತೊಡಗಿದವರಿಗೆ ಇದರಲ್ಲಿದ್ದ ಕಾಗದಪತ್ರಗಳಲ್ಲಿ ಎಷ್ಟೋ ಹೊಸ ಸಂಗತಿಗಳು ದೊರಕಬಹುದಾಗಿದೆ.

### ಶಕ್ತಿ (ಕೈಬರಹದ ಮಾಸಪತ್ರಿಕೆ)

ಸಂಪಾದಕ, ವಿಶ್ವೇಶ್ವರ ಕುಂಬಾರಗೇರಿಮಠ ಶಿಗ್ಗಾವಿ. ಸಂಚಾಲಕ, ದತ್ತಾತ್ರಯ ಕುಲಕರ್ಣಿ. ಪುಟಗಳು ೧೬. ವಾರ್ಷಿಕ ಚಂದಾ ೩ ರೂ. ಬಿಡಿ ಪ್ರತಿ ೪ ಆಣೆ.

ಶಿಗ್ಗಾವಿಯ ಕನ್ನಡ ಸಂಘದ ಮುಖಪತ್ರವಾಗಿ "ಶಕ್ತಿ" ಸೈಕ್ಲೋಸ್ಟಾಯಿಲದ ನೆರವಿನಿಂದ ಪ್ರಕಟವಾಗುತ್ತದೆ. ವಿಚಾರವನ್ನು ಪ್ರಸಾರಗೊಳಿಸಬೇಕೆಂಬುದು ಎಷ್ಟು ದುರ್ನಿವಾರವಾದ ಆಕಾಂಕ್ಷೆಯಾಗಿದೆ ಎಂಬುದನ್ನು ಅರಿಯಬೇಕಾದರೆ 'ಶಕ್ತಿ'ಯನ್ನು ಹೊರಡಿಸಿದವರು ಪಟ್ಟ ಶ್ರಮವನ್ನು ಅಳೆದು ನೋಡಬೇಕು. ಶಿಗ್ಗಾವಿಯ ಕನ್ನಡ ಸಂಘಕ್ಕೆ ಎಲ್ಲರ ಪ್ರೋತ್ಸಾಹವೂ ದೊರಕಲಿ.

### ಉಡುಪಿ ಕೃಷ್ಣಾಪುರಮಠದ ಪೀಳಿಗೆ [ಗುರುಪರಂಪರೆ]

ಪ್ರಕಾಶಕರು, ಕೆ. ರಾಜಗೋಪಾಲಾಚಾರ್ಯ 'ಕರಂಬಳಿ' ಉಡುಪಿ. ದ. ಕ. ಪುಟಗಳು ೪೭ ಬೆಲೆ ಉಚಿತ.

೧೯೪೪ ರ ಶ್ರೀಕೃಷ್ಣಪರ್ಯಾಯ ಪ್ರಕಾಶಿನಿಯ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಕೆಲವು ಲೇಖನಗಳನ್ನು ಶ್ರೀ ಕೆ. ರಾಜಗೋಪಾಲಾಚಾರ್ಯರು ಸಂಗ್ರಹಿಸಿ ಇದರಲ್ಲಿ ಪ್ರಕಟಿಸಿದ್ದಾರೆ. ಮಠದ ಅಭಿಮಾನಿಗಳು, ಗುರುಪರಂಪರೆಯ ವಿವರ ಅರಿಯಬೇಕೆಂಬವರು ಪ್ರಕಾಶಕರಿಗೆ ಅಂಚೆವೆಚ್ಚಕ್ಕೆಂದು ಒಂದಾಣೆಯ ಅಂಚೆಚೀಟಿಯನ್ನು ಕಳಿಸಿ ಅನೇಕ ಚಿತ್ರಗಳಿಂದ ಕೂಡಿ ಸುಶೋಭಿತವಾಗಿರುವ ಈ ಪುಸ್ತಕವನ್ನು ಉಚಿತವಾಗಿ ಪಡೆಯಬಹುದು.

### Millions on the Move

Issued by the Publications Division, Govt. of India Delhi. Pages 61. Price Rs 2/—

ಹಿಂದುಸ್ತಾನ ಸರಕಾರದವರು 'ಮಾಡರ್ನ ಇಂಡಿಯಾ ಸಿರೀಜ' ಎಂಬ ಮಾಲಿಕೆಯಲ್ಲಿ ಮೇಲ್ಕಾಣಿಸಿದ ಪುಸ್ತಕವನ್ನು ಪ್ರಕಟಿಸಿದ್ದಾರೆ. ವಿಭಜನಾನಂತರ ಜನರು ವಿಶೇಷತಃ ಪಶ್ಚಿಮ ಪಾಕಿಸ್ತಾನದಿಂದ ಹಿಂದುಸ್ತಾನಕ್ಕೂ ಹಿಂದುಸ್ತಾನದಿಂದ ಪಶ್ಚಿಮ ಪಾಕಿಸ್ತಾನಕ್ಕೂ ಎದ್ದೋಡಿದ ವಿಷಯವನ್ನೂ ನಿರಾಶ್ರಿತರ ಬವಣೆಯನ್ನೂ ಅವರ ಪುನರ್ನಿವೇಶನದ ವ್ಯವಸ್ಥೆಯನ್ನೂ ಅವರಿಗೆ ಸರಕಾರವು ಒದಗಿಸಿದ ಉಪಜೀವಿಕೆ ಉದ್ಯೋಗಾದಿಗಳ ವಿವರವನ್ನೂ ಇನ್ನು ಅಧಿಕೃತ ಅಂಕಿ ಸಂಖ್ಯೆಗಳನ್ನೂ ಈ ಪುಸ್ತಕದಲ್ಲಿ ಕಾಣಬಹುದು. ವಿಷಯವನ್ನು ೬ ಪ್ರಕರಣಗಳಲ್ಲಿ ವಿವೇಚಿಸಿ ಕೊನೆಗೆ ಅನುಬಂಧವನ್ನೂ ಕೊಡಲಾಗಿದೆ. ೧ ನೆಯ ಪ್ರಕರಣದಲ್ಲಿ ಸ್ಥಾನಾಂತರದ ಹಿನ್ನೆಲೆಯನ್ನೂ, ೨ ನೆಯದರಲ್ಲಿ ಅಸಂಖ್ಯಾತರು ಸ್ಥಾನಭ್ರಷ್ಟರಾದುದನ್ನೂ ೩ ನೆಯದರಲ್ಲಿ ಅವರನ್ನು ಬರಮಾಡಿಕೊಂಡು ಅವರಿಗೆ ಒದಗಿಸಿದ ಸಮಯೋಚಿತ ಸಹಾಯದ ವಿಷಯವನ್ನೂ ೪ ನೆಯ ೫ ನೆ ಪ್ರಕರಣಗಳಲ್ಲಿ ಪುನರ್ನಿವೇಶನದ ವಿಧಾನಗಳು ಆ ಬಗ್ಗೆ ಬಗೆ ಬಗೆಯ ಸೂಚನೆ ಸಲಹೆಗಳು ಕೊಡಲಾಗಿದ್ದು ಕೊನೆಯ ಪ್ರಕರಣದಲ್ಲಿ ಸರಕಾರದ ಮತ್ತು ಸಂಸ್ಥಾನಿಕರ ಅದರಂತೆ ಸ್ವಯಂಪ್ರೇರಿತ ಸಂಸ್ಥೆಯವರು ಮಾಡಿದ ಕೆಲಸದ ದಿಗ್ದರ್ಶನ ಮಾಡಲಾಗಿದೆ. ಪುಸ್ತಕದಲ್ಲಿ ಅನೇಕ ಸ್ವಯಂ ಸ್ಪಷ್ಟ ಚಿತ್ರಗಳಿದ್ದುದರಿಂದ ವಿಷಯಗ್ರಹಣವಾಗಿ ನಡೆದುದೆಲ್ಲ ಕಣ್ಣೆದುರು ಬಂದು ನಿಲ್ಲುವದು.

## ವಾರದ ಭವಿಷ್ಯ

(೧೫ನೆಯ ಪುಟದಿಂದ)

### ತುಲಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖವು ಬಹಳ ಉತ್ತಮ. ಹೆಂಡತಿಯ ಕಡೆಯಿಂದ ಪ್ರೋತ್ಸಾಹನಕಾರಕ ವರ್ತನೆ. ಮಿತ್ರಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಉತ್ತಮ ಮತ್ತು ಲಾಭವೂ ಪರಿಪೂರ್ಣ. ಕೆಲವು ಕೆಲಸದಲ್ಲಿ ಒಳ್ಳೆ ಪ್ರತಿಷ್ಠೆ ಆದರೆ ಕೆಲವು ಕೆಲಸಗಳಲ್ಲಿ ಅಪ್ರತಿಷ್ಠೆ ಮತ್ತೂ ಕೆಲವರಿಂದಂತೂ ನಿಷೇಧ. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಬಹಳ ಅನುಕೂಲತೆ, ಆದರೆ ಶತ್ರುಗಳು ಕಾರಸ್ಥಾನದಿಂದ ನಿಮ್ಮ ಪಕ್ಷವನ್ನು ಸಡಿಲಿಸಲು ಹವಣಿಸುವರು. ಪ್ರವಾಸವೂ ಪತ್ರವ್ಯವಹಾರವೂ ಭೆಟ್ಟಿಗಿಂತ ನೆಟ್ಟಗೆ. ಸ್ವಾತಿಯ ಕೊನೆಯ ೨ ವಿಶಾಖಾದ ಮೊದಲಿನ ೨ ಚರಣಗಳಿಗೆ ಹೆಚ್ಚು ಉತ್ತಮ. ತಾ. ೨೮, ೧, ೨ ಇವುಗಳು ಚೆನ್ನಾಗಿವೆ.

### ವೃಶ್ಚಿಕ

ನಿಮ್ಮ ಮತ್ತು ಮಕ್ಕಳ ಪ್ರಕೃತಿ ಉತ್ತಮ. ಆದರೆ ಹೆಂಡತಿಯದು ತುಸು ಮಟ್ಟಿಗೆ ಅಸ್ವಾಸ್ಥ್ಯ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ನೆಟ್ಟಗೆ. ಅನೀರಿಕ್ಷಿತ ಲಾಭ ಸಂಭವವೂ ಉಂಟು. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಶತ್ರುವು ಹಿಮ್ಮೆಟ್ಟಿದರೂ ಸ್ವಂತಕ್ಕೆ ಯಶಸ್ಸು ಕಡಮೆಯೇ. ಮಿತ್ರಸುಖವು ನೆಟ್ಟಗೆ. ಪ್ರವಾಸಾದಿ ಕೆಲಸಗಳು ಸಾಧಾರಣ. ಅನುರಾಧಾದ ಕೊನೆಯ ೨ ಮತ್ತು ಜ್ಯೇಷ್ಠಾದಮೊದಲಿನ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೯, ೩೦, ೩, ೪ ಇವುಗಳು ಒಳ್ಳೆಯವು.

### ಧನು

ಪ್ರಕೃತಿಗೆ ಸಾಕಷ್ಟು ಕಷ್ಟ. ಮಕ್ಕಳ ವರ್ತನೆ ರೇಗಿಸುವಂತಹದು. ಸ್ತ್ರೀ ಸುಖ ನೆಟ್ಟಗೆ ಆದರೆ ಉಳಿದ ಪ್ರಾಪಂಚಿಕ ವಿಷಯಗಳಲ್ಲಿ ಬಹಳ ತೊಂದರೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಎಲ್ಲ ಉತ್ತಮ. ಆದರೆ ನಿರರ್ಥಕ ವೆಚ್ಚ. ಸ್ಥಾವರದಲ್ಲಿ ಹೊಸ ತೊಡಕು ಉಂಟಾಗುವ ಸಂಭವ. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಮಧ್ಯಮ ಯಶ. ಮಿತ್ರಸುಖ ನೆಟ್ಟಗೆ ಆದರೆ ಅವರ ಮಾತು ವಿಚಾರಗಳು ರುಚಿಸದಂತಹವು. ಪ್ರವಾಸಾದಿ ಕೆಲಸಗಳು ಅನುಕೂಲ. ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲಿನ ೨ ಚರಣಗಳಿಗೆ ತೊಂದರೆ ಕಡಮೆ. ತಾ, ೨೮, ೧, ೨, ಇವು ಉತ್ತಮ.

### ಮಕರ

ಪ್ರಕೃತಿ ಮತ್ತೂ ಪ್ರಾಪಂಚಿಕ ಸುಖ ಸಾಧಾರಣವೇ. ಹೆಂಡತಿ ಮಕ್ಕಳಿಂದ ಮೇಲಿಂದ ಮೇಲೆ ಉಪಹಾಸ. ಮಕ್ಕಳಲ್ಲಿ ಕೆಲವರ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಇವು ಸಾಧಾರಣ ನೆಟ್ಟಗೆ. ಧಂದೆದಾರರಿಗಿಂತ ನೌಕರಿ ಮಾಡುವವರಿಗೆ ಹೆಚ್ಚು ಅನುಕೂಲ. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಉಭಯ ಪಕ್ಷಗಳಿಗೂ ಸಮಾನ ಸ್ಥಿತಿ. ಪ್ರವಾಸಾದಿ ಕಾರ್ಯಗಳು ಸಾಧಾರಣವೇ. ಉತ್ತರಾಷಾಢಾದ ಕೊನೆಯ ೨ ಚರಣ ಮತ್ತು ಶ್ರವಣಾದ ಮೊದಲಿನ ೨ ಚರಣ ಉಳ್ಳವರಿಗೆ ತೊಂದರೆ ಕಡಮೆ. ತಾ. ೨೮, ೨೯, ೩೦, ೪ ಇವುಗಳು ನೆಟ್ಟಗೆ.

### ಕುಂಭ

ಪ್ರಕೃತಿ ಸಾಧಾರಣವೇ. ಕೆಂಡಕೆಂಡ ವಿಷಯಗಳಲ್ಲಿ ಸಣ್ಣ ಕಾರಣಗಳ ಮೂಲಕ ಹೆಂಡತಿಗೆ ಸಂತಾಪವಾಗುವ ಯೋಗ. ಉಭಯತರಲ್ಲಿಯೂ ಮನಸ್ಸಿನ ಸಾಮರಸ್ಯ ಕಡಮೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ನೆಟ್ಟಗೆ ಆದರೆ ಲಾಭ ಕಡಮೆ. ಬಹುತರ ಎಲ್ಲ ಕೆಲಸಗಳಲ್ಲಿ ಜಯದ ಮಾನದಿಂದ ಪ್ರಯಾಸ ಮತ್ತು ವೆಚ್ಚ ಹೆಚ್ಚು. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಅನುಕೂಲತೆ. ಮಿತ್ರರಲ್ಲಿ ವಿರೋಧ. ಪ್ರವಾಸಾದಿ ಕಾರ್ಯಗಳು ನೆಟ್ಟಗೆ. ಶತತಾರಕೆಯ ಕೊನೆಯ ೨ ಮತ್ತು ಪೂರ್ವಾಭಾದ್ರಪದಾದ ಮೊದಲಿನ ೨ ಚರಣದವರಿಗೆ ತೊಂದರೆ ಕಡಮೆ. ತಾ. ೨೯, ೩೦, ೧ ಇವುಗಳು ಒಳ್ಳೆಯವೆ.

### ಮೀನ

ಪ್ರಕೃತಿ ಉತ್ತಮ. ರತಿ ಸುಖವೂ ನೆಟ್ಟಗೆ ಆದರೆ ಉಳಿದ ವಿಷಯಗಳಲ್ಲಿ ಹೆಂಡತಿಯೊಡನೆ ಬಹಳ ಮತಭೇದ. ಬೌದ್ಧಿಕ ಕಾರ್ಯಗಳಲ್ಲಿ ಯಶ. ಪ್ರಾಪಂಚಿಕ ಸುಖ ಸಾಧಾರಣವೇ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಇವೆಲ್ಲ ಉತ್ತಮವೇ. ಆದರೆ ಧಂದೆದಾರರಿಗಿಂತ ನೌಕರಿ ಮಾಡುವವರಿಗೆ ಹೆಚ್ಚು ಅನುಕೂಲ. ವಾದದಲ್ಲಿಯೂ ಸ್ಪರ್ಧೆಯಲ್ಲಿಯೂ ಯಶ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರವು ಹೆಚ್ಚು ನೆಟ್ಟಗೆ. ಉತ್ತರಾಭಾದ್ರಪದಾದ ಕೊನೆಯ ೨ ಮತ್ತು ರೇವತಿಯ ಮೊದಲಿನ ೨ ಚರಣದವರಿಗೆ ತೊಂದರೆ ಕಡಮೆ. ತಾ. ೨೯, ೩೦, ೪ ಇವುಗಳು ಚೆನ್ನಾಗಿವೆ.





ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಪುರೋಹಿತರಿಂದ ಮುದ್ರಿಸಿ ಪ್ರಕಟವಾಯಿತು.